



ಸೊಲ್ಲಾಪುರದ

# ಧನಶೆಟ್ಟಿ ಮಲ್ಲಪ್ಪನವರು



ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ
ಡಂಬಳ - ಗದಗ

## ವೀರಶೈವ ಪುಣ್ಯಪುರುಷ ಸಾಹಿತ್ಯರತ್ನಮಾಲೆಯ ಪ್ರಕಟನೆಗಳು

೧ ಡೆಪ್ಯೂಟಿ ಚೆನ್ನಬಸಪ್ಪನವರು – ಎಂ. ಜಿ. ಹಂದ್ರಾಳ
೨ ಸಕ್ಕರಿ ಕರಡೆಪ್ಪನವರು – ಬಸವರಾಜ ಅಜ್ಜಂಪುರಶೆಟ್ರು
೩ ವಾರದ ಮಲ್ಲಪ್ಪನವರು – ವಿ. ಶಿವಾನಂದ
೪ ಸಿರಸಂಗಿ ಲಿಂಗರಾಜರು – ದೇವೇಂದ್ರಕುಮಾರ ಹಕಾರಿ
೫ ಕೆ. ಪಿ. ಪುಟ್ಟಣ್ಣಶೆಟ್ಟರು – ಚ. ಸುಂದರೇಶನ್
೬ ಹರ್ಡೇಕರ ಮಂಜಪ್ಪನವರು – ಸಿದ್ದಯ್ಯ ಪುರಾಣಿಕ
೭ ಮಧುರಚೆನ್ನರು – ಗುರುಲಿಂಗ ಕಾಪಸೆ
೮ ಬಿ. ಶಿವಮೂರ್ತಿಶಾಸ್ತ್ರಿಗಳು – ಸಾ. ಶಿ. ಮರುಳಯ್ಯ
೯ ಭೂಮರಡ್ಡಿ ಬಸಪ್ಪನವರು – ಎಂ. ಎಸ್. ಲಠ್ಠೆ
೧೦ ಡಿ. ಸಿ. ಪಾವಟೆಯವರು – ಬಿ. ಸಿ. ಜವಳಿ
೧೧ ಚಂದ್ರಶೇಖರ ಪಾಟೀಲರು – ಸಂಗು ಕೋಟಿ
೧೨ ಮೈಲಾರ ಮಹದೇವಪ್ಪನವರು – ಸಿ. ವ್ಹಿ. ಕೆರಿಮನಿ
೧೩ ಗುಬ್ಬಿ ವೀರಣ್ಣನವರು – ಸದಾನಂದ ಕನವಳ್ಳಿ
೧೪ ಜಸ್ಟಿಸ್ ಮಹದೇವಯ್ಯನವರು – ಎಸ್. ವಿದ್ಯಾಶಂಕರ
೧೫ ಎಚ್. ಎಫ್. ಕಟ್ಟೀಮನಿಯವರು – ಎಸ್. ಆರ್. ಗುಂಜಾಳ
೧೬ ಪಿ. ಆರ್. ಕರಿಬಸವ ಶಾಸ್ತ್ರಿಗಳು – ಎಂ. ಜಿ. ನಂಜುಂಡಾರಾಧ್ಯ
೧೭ ಬಸವಪ್ಪಶಾಸ್ತ್ರಿಗಳು – ಸಿ. ಎಸ್. ಶಿವಕುಮಾರಸ್ವಾಮಿ
೧೮ ಸೊಲ್ಲಾಪುರದ ರುದ್ರಮ್ಮನವರು – ರವಿದೇವಿ, ಸುಗ್ಗಲಾದೇವಿ
೧೯ ಚಿಕ್ಕೋಡಿ ತಮ್ಮಣ್ಣಪ್ಪನವರು – ಜೆ. ಎಸ್. ಕುಳ್ಳಿ
೨೦ ಚನ್ನಮಲ್ಲಿಕಾರ್ಜುನರು – ಚನ್ನಪ್ಪ ಯರೇಸೀಮೆ
೨೧ ರಾಜಾ ಲಖಮಗೌಡರು – ಎಸ್. ಜಿ. ಥಿವಾರಿ
೨೨ ವೈ. ನಾಗೇಶಶಾಸ್ತ್ರಿಗಳು – ಜೋಳದರಾಶಿ ದೊಡ್ಡನಗೌಡ
೨೩ ಬಸರಿಗಿಡದ ವೀರಪ್ಪನವರು – ಶಾಂತರಸ
೨೪ ಸರದಾರ ವೀರನಗೌಡರು – ಶಾಂತಾದೇವಿ ಮಾಳವಾಡ
೨೫ ಹಳಕಟ್ಟಿ ಫಕೀರಪ್ಪನವರು – ಸಂಗಮನಾಥ ಹಂಡಿ
೨೬ ಗುಬ್ಬಿ ತೋಟದಪ್ಪನವರು – ಆರ್. ರಾಚಪ್ಪ
೨೭ ದೊಡ್ಡಮೇಟಿ ಅಂದಾನಪ್ಪನವರು – ಜ್ಞಾನದೇವ ದೊಡ್ಡಮೇಟಿ
೨೮ ಎಂ. ಬಸವಯ್ಯನವರು – ಎಚ್. ದೇವೀರಪ್ಪ

→

ವೀರಶೈವ ಪುಣ್ಯಪುರುಷ ಸಾಹಿತ್ಯರತ್ನಮಾಲೆ–೬೧

# ಹುತಾತ್ಮ ಧನಶೆಟ್ಟಿ ಮಲ್ಲಪ್ಪನವರು

ಲೇಖಕರು:
ಅಪ್ಪಾರಾವ ಅಕ್ಕೋಣಿ

ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ
ಡಂಬಳ–ಗದಗ

ಪ್ರಕಾಶಕರು :
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ
ಗದಗ

ಗ್ರಂಥದ್ಧಾನ :
ಶ್ರೀಮತಿ ಬಸವಣ್ಣೆವ್ವ ವಿರುಪಾಕ್ಷಪ್ಪ ವಾಗಿ ಮತ್ತು ಮಕ್ಕಳು
ಸುರೇಶ ಪಬ್ಲಿಕೇಶನ್, ಗದಗ.



ಬೆಲೆ : ರೂ ೧-೫೦

ಮುದ್ರಕರು :
ಫ. ಶಿ. ಭಾಂಡಗೆ
ತ್ವರಿತ ಮುದ್ರಣಾಲಯ
ಗಂಗಾಪೂರಪೇಟೆ, ಗದಗ-೫೮೨೧೦೧

# ಮೊದಲ ಮಾತು

ಶಿವಶರಣರ ವಚನವಾಙ್ಮಯವನ್ನು ಮಥಿಸಿ ಸಾಹಿತ್ಯ ಸೌಂದರ್ಯವನ್ನು ಹರಿಹರ-ರಾಘವಾಂಕಾದಿಗಳು ಪ್ರಕಟಿಸಿದರೆ, ತತ್ತ್ವಸೌಂದರ್ಯವನ್ನು ಸಾಕ್ಷಾತ್ಕಾರಗೊಳಿಸಿದವರು, ಏಳು ನೂರೊಂದು ವಿರಕ್ತರು. ಈ ವಿರಕ್ತ ಸಮೂಹದ ನಾಯಕ ವ್ಯಕ್ತಿಯಾಗಿ, ವೀರಶೈವ ಧರ್ಮಪರಂಪರೆಯ ಯುಗಪುರುಷ ನಾಗಿ ಮೆರೆದವ ತೋಂಟದ ಸಿದ್ಧಲಿಂಗಯತಿ. ಪ್ರಭುವಿನಂತೆ ನಿರಂಜನ ಮೂರ್ತಿಯಾಗಿ, ಬಸವನಂತೆ ವೀರಶೈವ ಸಂಘಟಕನಾಗಿ ಚೆನ್ನಬಸವಣ್ಣನಂತೆ ತತ್ತ್ವವೇತ್ತನಾಗಿ ಬೆಳಗಿದ ೧೫ ನೆಯ ಶತಮಾನದ ಈ ಶಿವಯೋಗಿಸೂರ್ಯನ ಪೀಠ-ಪ್ರಪೀಠ ಪರಂಪರೆ, ಶಿಷ್ಯ-ಪ್ರಶಿಷ್ಯ ಪರಂಪರೆ ನಾಡಿನ ಒಳಗೆಲ್ಲ ತುಂಬಿದೆ; ಹೊರಗೆಲ್ಲ ತುಳುಕಿದೆ. ಅಂದಿನಿಂದಲೂ ಕನ್ನಡಿಗರ, ವಿಶೇಷ ವಾಗಿ ವೀರಶೈವರ ಬದುಕನ್ನು ತಿದ್ದಿ, ಭಾವನೆಯನ್ನು ತೀಡಿ, "ಅಂಗವೇ ಶರಣ, ಲಿಂಗವೇ ಶಿವ" ಎಂಬ ಮಂತ್ರವನ್ನು ಘೋಷಿ ಸುತ್ತ, ಶಿಷ್ಯಕೋಟಿಯನ್ನು ಪೋಷಿಸುತ್ತ ಬಂದ ಘನತೆ ಈ "ತೋಂಟದಾರ್ಯ ಪೀಠಪರಂಪರೆ"ಗೆ ಸಲ್ಲುತ್ತದೆ.

'ಶಿಷ್ಯರ ಸೇವೆಯೇ ಶಿವಪೂಜೆ'ಯೆಂಬ ಮಹಾಗುರು ತೋಂಟದಾರ್ಯರ ಸಂದೇಶದಂತೆ ನಡೆಯುವುದು ತನ್ನ ಪರಮ ಕರ್ತವ್ಯವೆಂದು ಡಂಬಳ-ಗದುಗಿನ "ಶ್ರೀ ಜಗದ್ಗುರು ತೋಂಟ ದಾರ್ಯ ಸಂಸ್ಥಾನಮಠ" ನಂಬಿದೆ. ಈ ನಂಬಿಕೆಯ ಫಲವಾಗಿ

೧೯೭೫ ರಲ್ಲಿ ಸ್ಥಾಪಿತವಾದ ."ವೀರಶೈವ ಅಧ್ಯಯನ ಸಂಸ್ಥೆ"ಯ ಅಂಗವಾಗಿ ಪ್ರಾರಂಭವಾದ "ವೀರಶೈವ ಪುರಾತನ ಸಾಹಿತ್ಯರತ್ನ ಮಾಲೆ"ಯ ಜೊತೆ ಈಗ "ವೀರಶೈವ ಪುಣ್ಯಪುರುಷ ಸಾಹಿತ್ಯ ರತ್ನಮಾಲೆ"ಯ ಉದಯವಾಗಿದೆ.

ಸಮಾಜದಲ್ಲಿ ಘಟಿಸಿದ ಸತ್ಕಾರ್ಯಗಳ ದಾಖಲೆ, ಸಮಾಜವನ್ನುದ್ಧರಿಸಿದ ಪುಣ್ಯಪುರುಷರ ಚರಿತ್ರೆಗಳು ಮುಂದಿನ ಪೀಳಿಗೆಗೆ ದಾರಿದೀಪವೂ ಹೌದು, ತೋರುಬೆರಳೂ ಹೌದು. ಕಾರಣ ಇತ್ತೀಚಿನ ದಿನಗಳಲ್ಲಿ ಸಮಾಜವನ್ನು ಕಟ್ಟಿ ಬೆಳೆಸಿದ, ಸಮಾಜಕ್ಕಾಗಿ ದುಡಿದ ಮಹಾತ್ಮರ ಚರಿತ್ರೆಗಳನ್ನು ಬರೆದು ಪ್ರಕಟಿಸಬೇಕೆಂಬ ಉದ್ದೇಶದಿಂದ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ೧೯–೨೦ ನೆಯ ಶತಮಾನಗಳಲ್ಲಿ ಬಾಳಿದ ನೂರಾರು ಜನ ವೀರಶೈವ ಪುಣ್ಯಪುರುಷರಲ್ಲಿ ಪ್ರತಿ ತಿಂಗಳು ಒಬ್ಬರನ್ನು ಕುರಿತು ಉಪನ್ಯಾಸವನ್ನೇರ್ಪಡಿಸುವದು, ಏರ್ಪಡಿಸಿದ ಉಪನ್ಯಾಸವನ್ನು ಪ್ರಕಟಿಸಿ ಸುಲಭ ಬೆಲೆಯಲ್ಲಿ ವಿತರಣೆಗೊಳಿಸುವದು ಈ ಮಾಲಿಕೆಯ ಸಂಕಲ್ಪವಾಗಿದೆ. ತಿಂಗಳು ತಿಂಗಳು ಪ್ರಕಟವಾಗುವ ಈ ಮಾಲಿಕೆಯಲ್ಲಿ ,ಅರವತ್ತೊಂದನೆಯ ಕೃತಿ "ಹುತಾತ್ಮ ಧನಶೆಟ್ಟಿ ಮಲ್ಲಪ್ಪನವರು."

ಧನಶೆಟ್ಟಿ ಮಲ್ಲಪ್ಪನವರು ವೀರಶೈವದ ಗಣಾಚಾರವೇ ಮೈವೆತ್ತ ಮಹನೀಯರು. ಸಿದ್ಧರಾಮನ ಪರಮಭಕ್ತರಾದ ಇವರು ಭಾರತ ಸ್ವಾತಂತ್ರ್ಯಾಂದೋಲನದಲ್ಲಿ ಭಗತ್‌ಸಿಂಗ ಸಾದೃಶ ಪಾತ್ರವಹಿಸಿದರು. ಸಮಯ ಭಕ್ತಿ–ರಾಷ್ಟ್ರ ಭಕ್ತಿಗಳ ಸಮನ್ವಯಕ್ಕೆ ಪರಮ ಆದರ್ಶವಾಗಿದ್ದ ಶ್ರೀಯುತರು ಸೊಲ್ಲಾಪುರ



ಪ್ರದೇಶದಲ್ಲಿ ಕೈಗೆತ್ತಿಕೊಂಡ ಹೋರಾಟ, ಭಾರತದ ಇತಿಹಾಸದಲ್ಲಿ ಚಿರಸ್ಥಾಯಿಯಾಗಿದೆ. ವೀರಶೈವರ ಉತ್ಕಟ ರಾಷ್ಟ್ರಪ್ರೇಮಕ್ಕೆ ನಿದರ್ಶನವಾಗಿದ್ದ ಮಲ್ಲಪ್ಪನವರು ಸ್ವಾತಂತ್ರ್ಯಾಂದೋಲನಕ್ಕೆ ಈ ಸಮಾಜ ಅರ್ಪಿಸಿ ಬಲಿದಾನದ ಕಾಣಿಕೆಯೆನಿಸಿದ್ದಾರೆ.

ಇಂತಹ ಹುತಾತ್ಮರನ್ನು ಕುರಿತ ಪುಸ್ತಕವೊಂದನ್ನು ಪ್ರಕಟಿಸಲು ನಮಗೆ ತುಂಬಾ ಸಂತೋಷವೆನಿಸುತ್ತದೆ. ಇಲ್ಲಿಯ ಅಭಿಪ್ರಾಯಗಳಿಗೆ ಲೇಖಕರೇ ಹೊಣೆಯೆಂದು ಬೇರೆ ಹೇಳಬೇಕಾಗಿಲ್ಲ. ನಮ್ಮ ಸಂಸ್ಥೆಯ ಮೇಲಿನ ಅಭಿಮಾನದಿಂದ ಈ ಕೃತಿಯನ್ನು ಬರೆದು ಕೊಟ್ಟ ವಾಣಿಜ್ಯ ಪ್ರಚಾರಾಧಿಕಾರಿಗಳಾದ ಮಾನ್ಯ ಶ್ರೀ ಅಪ್ಪಾರಾವ ಅಕ್ಕೋಣಿ ಅವರಿಗೂ, ಈ ಗ್ರಂಥದ ವೆಚ್ಚವನ್ನೂ ನೀಡಿದ ಶ್ರೀ ಸ್ವಾಮಿಯಲ್ಲಿ ಪರಮ ವಿಶ್ವಾಸವನ್ನಿಟ್ಟ ಗದುಗಿನ ಸುರೇಶ ಪಬ್ಲಿಕೇಶನ್ಸಿನ ಶ್ರೀ ಮಾಗಿ ದಂಪತಿಗಳಿಗೆ, ಹಾಗೂ ಅಂದವಾಗಿ ಮುದ್ರಿಸಿದ ತ್ವರಿತ ಮುದ್ರಣಾಲಯದವರಿಗೆ ಶ್ರೀ ಎಡೆಯೂರು ಶಿವಯೋಗಿಶ್ವರ ಸಕಲ ಸನ್ಮಂಗಲವನ್ನುಂಟು ಮಾಡಲೆಂದು ಹಾರೈಸುತ್ತೇವೆ.

–ಪ್ರಕಾಶಕರು

# ನಿವೇದನೆ

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗಾಂಧಿ, ನೆಹರು, ಸರದಾರ ಪಟೇಲ, ಮೌಲಾನಾ ಆಜಾದ, ಭಗತಸಿಂಗ್, ಸುಭಾಷ್ಚಂದ್ರ ಬೋಸ ಮುಂತಾದ ಹೆಸರುವಾಸಿಯಾದ ವ್ಯಕ್ತಿಗಳನ್ನು ಬಿಟ್ಟು ದುಡಿದವರು ಲಕ್ಷ ಲಕ್ಷ ಜನರು. ಮಡಿದವರು ಸಹಸ್ರಾರು. ಇಂಥ ಅಜ್ಞಾತ ವ್ಯಕ್ತಿಗಳು ಇಂದು ಯಾರ ನೆನಪಿನಲ್ಲಿಯೂ ಉಳಿದಿಲ್ಲ.

ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ದುಡಿದು, ಇಂದು ಕಣ್ಮರೆಯಾಗಿರುವ ವ್ಯಕ್ತಿಗಳ ಬಗ್ಗೆ ಪುಸ್ತಕ ಬರೆಯಿಸಿ, ಪ್ರಕಟಿಸುವ ಹೊಣೆ ಹೊತ್ತಿರುವ ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಮಠದ ಶ್ರೀಗಳವರ ಕಾರ್ಯ ಘನವಾದುದ್ದು. ಅವರಿಗೆ ನನ್ನ ಸಹಸ್ರ, ಸಹಸ್ರ ನಮಸ್ಕಾರಗಳು.

ಸಮಾಜದ ಏಳ್ಗೆಗಾಗಿ ತಮ್ಮನ್ನೇ ಸಮರ್ಪಿಸಿಕೊಂಡವರ ಚರಿತ್ರೆಗಳನ್ನು ಸಂಗ್ರಹಿಸಿ, ಮುಂಬರುವ ಪೀಳಿಗೆಗೆ ಒದಗಿಸುವ ಮಹತ್ಕಾರ್ಯದಲ್ಲಿ ನನ್ನನ್ನು ಭಾಗಿಯಾಗುವಂತೆ ಮಾಡಿದುದಕ್ಕೆ ನಾನು ಋಣಿ.

"ಧನಶೆಟ್ಟಿ ಮಲ್ಲಪ್ಪ"ನವರನ್ನು ಕುರಿತು ಬರೆಯುವದರ ಮೂಲಕ ದೇಶಕ್ಕಾಗಿ ಮಡಿದವರಿಗೆ 'ನಮನ' ಅರ್ಪಿಸುವ



ಸೌಭಾಗ್ಯ ನನ್ನದಾಗಿದೆ. ನಾನು 'ಧನಶೆಟ್ಟಿ ಮಲ್ಲಪ್ಪ'ನವರನ್ನು ಕಂಡಿಲ್ಲ. ಅವರ ಸಮೀಪವರ್ತಿಗಳನ್ನು ಭೇಟಿ ಮಾಡಿ, ಲಭ್ಯವಿರುವ ಗ್ರಂಥಗಳನ್ನು ಆಧರಿಸಿ, ಸಮಗ್ರ ಚಿತ್ರಣ ನೀಡಲು ಪ್ರಯತ್ನಿಸಿದ್ದೇನೆ. ಎಲ್ಲಾದರೂ ಎಡವಿದ್ದರೆ ಅದಕ್ಕೆ ನಾನು ಹೊಣೆ. ಒಳ್ಳೆಯ ಅಂಶಗಳು ಮೂಡಿ ಬಂದಿದ್ದರೆ, ನನ್ನ ಬರವಣಿಗೆಗೆ ನೆರವು ನೀಡಿದ ವ್ಯಕ್ತಿಗಳು, ಆಧಾರ ಗ್ರಂಥಗಳು ಕಾರಣ ಎಂದು ಹೇಳಬಹುದು.

ಈ ಕೃತಿ ಹೊರಬರಲು ನೆರವು ನೀಡಿದ ಸಕಲರಿಗೂ ನನ್ನ ವಂದನೆಗಳು. ಪ್ರಕಾಶಕರಿಗೂ ನಾನು ಕೃತಜ್ಞನಾಗಿದ್ದೇನೆ.

'ಅಮೃತ'
ಮಹಾತ್ಮಾ ಬಸವೇಶ್ವರ ಕಾಲನಿ,
ಕಲಬುರ್ಗಿ_೫

–ಅಪ್ಪಾರಾವ ಅಕ್ಕೋಣಿ

# ಬೆಳೆಯು ಸಿರಿ

ಬಸವಕಲ್ಯಾಣದ ತ್ರಿಪುರಾಂತಕ ಕೆರೆಯ ನೀರಿನ ಮೇಲೆ ಬೆಳಗಿನ ಹೊಂಗಿರಣಗಳು ಹಾದು ಬಂದವು. ಕೆರೆಯ ತಿಳಿ ಜಲದಲ್ಲಿ ಚಿನ್ನ ಕರಗಿದಂತಾಗಿ ನೀರು ಹಸುಳೆ ಬಿಸಿಲಲ್ಲಿ ಥಳಥಳಿಸಿತು. ಇನ್ನೂ ಸುತ್ತಮುತ್ತ ಜನ ಸಂಚಾರ ಪ್ರಾರಂಭವಾಗಿರಲಿಲ್ಲ. ಎಡಬಲದ ಗಿಡಮರಗಳೆಡೆಯಲ್ಲಿ ಮೌನ ಮಿಸುಕಾಡುತ್ತಿತ್ತು.

ಧನಶೆಟ್ಟಿ ವಂಶಜರು ಕೆರೆಯಲ್ಲಿ ಮಿಂದುಶಿವಮಂತ್ರ ಪಠಿಸಿ ಕಾಣದ ಶಿವನಿಗೆ ಕೈ ಮುಗಿದರು. ಮಣ್ಣಿನ ತತ್ರಾಣಿಯಲ್ಲಿ ನೀರು ತುಂಬಿಕೊಂಡು ಬಸವಣ್ಣದೇವರ ಗುಡಿಗೆ ನಡೆದು ಬಂದರು. ಬಸವಣ್ಣನಿಗೆ ಅಡ್ಡಬಿದ್ದು ಮೌನ ಪ್ರಾರ್ಥನೆ ಸಲ್ಲಿಸಿದರು. ವಿಭೂತಿಯ ಉಂಡೆಯೊಂದನ್ನು ಧೋತರದ ಸೆರಗಿನಲ್ಲಿ ಆಶೀರ್ವಾದದ ರೂಪದಲ್ಲಿ ಹೊತ್ತು ಹೊರ ಬಂದರು.

ಮಡದಿ ಮಕ್ಕಳೊಂದಿಗೆ ಅವರು ಹುಟ್ಟೂರಾದ ಕಲ್ಯಾಣವನ್ನು ಎಂದೆಂದಿಗೂ ತೊರೆದು ಸೊನ್ನಲಿಗೆಯತ್ತ ಅಡಿಯಿಟ್ಟರು. ನೀಳವಾದ ಉಸಿರೆಳೆದು ಇಷ್ಟುದಿನ ತಮ್ಮದಾಗಿದ್ದ ಊರನ್ನೂ, ಊರಿನ ಸಿರಿಯನ್ನೂ ಒಮ್ಮೆ ಕಣ್ತುಂಬ ನೋಡಿ, ಕಣ್ಣುಗಳಲ್ಲಿ ತುಂಬಿ ನಿಂತಿದ್ದ ಕಂಬನಿಯ ಹನಿಗಳೆರಡನ್ನು ಆ ಊರಿನ ಮಣ್ಣಿಗರ್ಪಿಸಿ ಕಣ್ಣು ಮುಚ್ಚಿದರು. ಕ್ಷಣದ ನಂತರ ಕಣ್ತೆರೆದು ಶಿವ ಶಿವಾ ಎನ್ನುತ್ತ ಸೊನ್ನಲಿಗೆಯ ದಾರಿಯ ಮೇಲೆ ಬಿರಬಿರನೆ ನಡೆದರು.

ಧನಶೆಟ್ಟಿಯವರ ಮೂಲ ಊರು ಬೀದರ ಜಿಲ್ಲೆಯ ಬಸವ ಕಲ್ಯಾಣ. ನಿಜಾಮನ ಆಳಿಕೆಯಲ್ಲಿ ಕಲ್ಯಾಣವು ಒಬ್ಬ ನವಾಬನ ಜಹಗೀರಾಗಿತ್ತು. ನವಾಬನಿಗೂ ಧನಶೆಟ್ಟಿ ಮನೆತನದವರಿಗೂ ಜಗಳವುಂಟಾಗಿ ನವಾಬನ ಆಣತಿಯಂತೆ ಅವರು ಕಲ್ಯಾಣ ಬಿಟ್ಟು ಬರಿಗೈಯಿಂದ ಹೊರಡಬೇಕಾಯಿತು. ಸುಮಾರು ೧೯ನೆಯ ಶತಮಾನದ ಪ್ರಾರಂಭಕ್ಕೆ ಅವರು ಸೊಲ್ಲಾಪುರಕ್ಕೆ ಬಂದರೆಂದು ಅವರ ಮನೆತನದ ಮೂಲಗಳಿಂದ ತಿಳಿದು ಬರುತ್ತದೆ.

ಕಲ್ಯಾಣಕ್ಕೆ ವಿದಾಯ ಹೇಳಿದ ಶೆಟ್ಟಿಯವರು ಸೊಲ್ಲಾಪುರಕ್ಕೆ ಬಂದಾಗ ಅವರಿಗಿದ್ದ ಆಸರೆ ಎಂದರೆ ಅಲ್ಲಿಯ ದೇವರು ಸಿದ್ಧರಾಮನ ಮೇಲಿನ ಅಚಲಭಕ್ತಿಯೊಂದೇ. "ಸಿದ್ಧರಾಮ ತಮ್ಮ ಕೈ ಬಿಡಲಾರ" ಎಂಬ ನಂಬಿಕೆಯಿಂದಲೇ ಅವರು ಅಲ್ಲಿಗೆ ಬಂದು ನೆಲೆಸಿದರು. ಹೆಸರು ಧನಶೆಟ್ಟಿಯಾದರೂ ಧನವೂ ಇಲ್ಲದ, ಶೆಟ್ಟಿಯೂ ಅಲ್ಲದ ಶ್ರೀ ಸಾಮಾನ್ಯರು ಅವರು. ಬರಿಗೈಯಿಂದ ಬಂದ ಧನಶೆಟ್ಟಿ ಸೋದರರು ದೃಢಕಾಯದ ಕಾಯಕ ನಿಷ್ಠರು.

ಸಿದ್ಧರಾಮನ ಆಶ್ರಯ ಕೋರಿ ಬಂದವರಿಗೆ ಕಾಯಕವೇ ಕೈಲಾಸ. ಕಾಯಕ ಯಾವುದಾದರೇನು ? ಕೈಕೊಂಡ ಕಾಯಕದಲ್ಲಿಯ ನಿಷ್ಠೆ ಮುಖ್ಯ. ವ್ಯಾಪಾರ ಮಾಡಲು ಸಂಪತ್ತಿರಲಿಲ್ಲ. ಸರ್ಕಾರಿ ಉದ್ಯೋಗ ಅರಸಲು ಸಾಕಷ್ಟು ವಿದ್ಯೆಯಿರಲಿಲ್ಲ. ಹೀಗಾಗಿ ಕೂಲಿಕೆಲಸವೇ ಅವರ ನಿತ್ಯ ಕಾಯಕವಾಯಿತು. ಕಸುವುತುಂಬಿದ ಮೈಯ ಧನಶೆಟ್ಟಿ ಸೋದರರಿಗೆ ಕಾಯಕ ಕಷ್ಟವೆನಿಸಲಿಲ್ಲ. ಎಂಥ ಕಠಿಣ ಕೆಲಸವನ್ನಾದರೂ ಲೀಲಾಜಾಲವಾಗಿ ಮಾಡಿಕೊಂಡು ಹೋಗುವ ಸಾಮರ್ಥ್ಯ ಅವರದು. ವೀರ



ಶೈವ ಸ್ಮಶಾನದಲ್ಲಿ ಶವಗಳಿಗೆ ಸಮಾಧಿ ತೋಡುವ ಕಾಯಕಕ್ಕೆ ಕೈಯಿಟ್ಟರು. ಆ ದಿನಗಳಲ್ಲಿ ಅವರ ಕೆಲಸಕ್ಕೆ ದಿನಕ್ಕೆ ಐವತ್ತು ಪೈಸೆಯಿಂದ ಒಂದು ರೂಪಾಯಿಯವರೆಗೆ ದೊರೆತರೆ ಹೆಚ್ಚು. ಆದರೂ ಅವರು ಅಷ್ಟರಲ್ಲಿಯೇ ತೃಪ್ತರು. ಕಾಯಕ–ದಾಸೋಹ, ಪ್ರಸಾದ ಎನ್ನುವ ತತ್ವ ಅವರದು. ಸೊಲ್ಲಾಪುರದ ಮಂಗಳವಾರಪೇಟೆಯಲ್ಲಿ ತಿಂಗಳಿಗೆ ನಾಲ್ಕು ರೂಪಾಯಿ ಬಾಡಿಗೆಗೆ ಮನೆಯೊಂದನ್ನು ಹಿಡಿದು ಇರತೊಡಗಿದರು. ಈ ಹೆಣ ಹೂಳುವ ಕಾಯಕ ಅವರ ಮುಂದಿನ ಪೀಳಿಗೆಗೂ ಮುಂದುವರೆಯಿತು.

ಮುಂದೆ ಬಂದ ಆ ವಂಶದ ಶ್ರೀ ರೇವಣಸಿದ್ದಪ್ಪ ಧನಶೆಟ್ಟಿ ಅವರದೂ ಇದೇ ಕಾಯಕ. ಪತ್ನಿ ಬಸಮ್ಮ. ಈ ದಂಪತಿಗಳುದರದಿಂದ ಕ್ರಿ. ಶ. ೧೯೦೭ರಲ್ಲಿ ಹುತಾತ್ಮರಾಗಿ ಮೆರೆದ ಮಲ್ಲಪ್ಪನವರು ಜನ್ಮತಳೆದರು. ಪರಿಶುದ್ಧ ಪ್ರಾಮಾಣಿಕ ಜೀವನ ನಡೆಸುತ್ತಿರುವ ಧನಶೆಟ್ಟಿಯವರು ಇಲ್ಲಿಗೆ ಬಂದು ಅಂದಿಗೆ ಒಂದು ಶತಮಾನ ಕಳೆದಿದ್ದರೂ ಅವರ ಮನೆತನಕ್ಕೊಂದು ಸ್ವಂತ ಮನೆ ಮಾಡಿಕೊಳ್ಳಲಾಗಲಿಲ್ಲ.

ಸುತ್ತಲಿನ ಪರಿಸರ ಬದಲಾಗತೊಡಗಿತು. ಶಾಲೆ ಕಾಲೇಜುಗಳ ಸಂಖ್ಯೆಯೊಂದಿಗೆ ವಿದ್ಯಾರ್ಥಿಗಳ ಸಂಖ್ಯೆಯೂ ಕಣ್ಣಿಗೆ ಕಾಣಬರುವಷ್ಟು ಬೆಳೆಯಿತು. ಸೊಲ್ಲಾಪುರದ ಪ್ರೈಮರಿ ಶಾಲೆಗಳಲ್ಲಿ ಪುಟ್ಟ ಪುಟ್ಟ ಮಕ್ಕಳು ಪ್ರವೇಶ ಪಡೆದುಕೊಂಡು ಶಾಲೆಗೆ ಹೋಗತೊಡಗಿದರು. ರೇವಣಸಿದ್ದಪ್ಪನವರು ತಮ್ಮ ಏಕಮಾತ್ರ ಪುತ್ರ ಮಲ್ಲಪ್ಪನನ್ನೂ ಶಾಲೆಗೆ ಕಳಿಸಿದರು.

ಮಲ್ಲಪ್ಪ ಶಾಲೆಯ ಅಭ್ಯಾಸಕ್ಕಿಂತ ಆಟದ ಮೈದಾನ ದಲ್ಲಿಯೇ ಹೆಚ್ಚು ಪ್ರಗತಿ ಸಾಧಿಸಿದ. ಶಾಲೆಯ ಎಲ್ಲ ಆಟಪಾಟಗಳಲ್ಲಿ ಅವನೇ ಮುಂದು. ಕಬಡ್ಡಿ ಚಾಂಪಿಯನ್ ಅವನು. ದಷ್ಟಪುಷ್ಟವಾದ ಮೈಕಟ್ಟಿನ ಮನಸೆಳೆವಬಾಲಕ ಶಾಲೆಯಲ್ಲಿ 'ಪೈಲ್ವಾನ್' ಎಂದು ಅನ್ವರ್ಥಕನಾಮ ಪಡೆದ. ಅದಕ್ಕೆ ತಕ್ಕಂತೆ ಅವನಿಗೆ ವ್ಯಾಯಾಮದ ಕಡೆಗೆ ಹೆಚ್ಚಿನ ಒಲವು.

ಮನೆಯಲ್ಲಿ ಮಾತು ಕನ್ನಡ. ಶಾಲೆಯಲ್ಲಿಯ ವಿದ್ಯಾಭ್ಯಾಸ ಮರಾಠಿ. ಜಮಾ–ಖರ್ಚು, ಓದು–ಬರಹ ಅವನಿಗೆ ಬಂದಾಗ ತಂದೆ ಅಷ್ಟಕ್ಕೆಯೇ ಓದು ನಿಲ್ಲಿಸಿ ಮಗನನ್ನು ಗುಮಾಸ್ತೆ ಕೆಲ ಸಕ್ಕೆ ಸೇರಿಸಲು ಹವಣಿಸಿದರು.

ಸೊಲ್ಲಾಪುರದಲ್ಲಿ ವಾರದ ಮಲ್ಲಪ್ಪನವರೆಂಬ ಶ್ರೀಮಂತರು 'ಇಂದ್ರ ಭವನ' ವೆಂಬ ವಾಸ್ತುಶಿಲ್ಪ ನಿರ್ಮಿಸುತ್ತಿದ್ದರು. ರೇವಣ ಸಿದ್ದಪ್ಪ ಇವರ ಬಳಿ ಮಲ್ಲಪ್ಪನನ್ನು ಕೆಲಸಕ್ಕೆ ಕಳಿಸಿದ. ಅಲ್ಲಿ ದುಡಿಯುತ್ತಿದ್ದ ಕೂಲಿಕಾರರ ಹಾಜರಿ ಬರೆಯುವ ಕೆಲಸ ಮಲ್ಲಪ್ಪನದು. ವಾರದ ಸಂಬಳ ಒಂದು ರೂಪಾಯಿ. ತನ್ನ ಹನ್ನೆರಡನೆಯ ವಯಸ್ಸಿನಲ್ಲಿಯೇ ಮಲ್ಲಪ್ಪ ಕಾಯಕ ನಿರತ ನಾದನು.

ಕಾಲಚಕ್ರ ಉರುಳತೊಡಗಿತು. ಮಲ್ಲಪ್ಪನ ಮದುವೆಯೆ ಡೆಗೆ ಹೆತ್ತವರ ಮನಸ್ಸು ಹರಿಯಿತು. ಇದ್ದೊಬ್ಬ ಮಗ ಓದು ಬರಹ ಕಲಿತ. ಕೆಲಸಕ್ಕೂ ಸೇರಿದ. ಮದುವೆಯೊಂದೇ ಈಗ ಉಳಿದದ್ದು. ಅದಿಷ್ಟು ಮಾಡಿದರೆ ಜವಾಬ್ದಾರಿ ಕಡಿಮೆಯಾದೀ



ತೆಂಬ ಹಂಬಲ ಅವರಿಗೆ. ಸರಿ, ಹಿರಿಯರ ಮನದಲ್ಲಿ ಆಸೆ ಮೊಳೆ ತರೆ ಅಡ್ಡಿ ಬರುವವರಾರು ? ಮಲ್ಲಪ್ಪನ ಮದುವೆಗೆ ಸಿದ್ಧತೆ ನಡೆಯಿತು.

ಚೆನ್ನಬಸವಪ್ಪಶೆಟ್ಟಿಯವರ ಮಗಳು ನೀಲಮ್ಮನೊಂದಿಗೆ ಮದುವೆ ನಿಶ್ಚಯವಾಯಿತು. ಆ ಬಾಲೆಗೆ ಆರು ವರ್ಷ ವಯಸ್ಸು. ಹದಿನಾಲ್ಕರ ಮಲ್ಲಪ್ಪನೊಂದಿಗೆ ಅವಳ ಮದುವೆ ಮುಗಿಯಿಸಿ, ಹಿರಿಯರು ಸಂತಸಪಟ್ಟರು.

ಮುಂದೆ ಮಲ್ಲಪ್ಪ ನಗರದ ಪಂದಾರಕರ ಅಡಕಿ ಅಂಗಡಿ ಯಲ್ಲಿ ಗುಮಾಸ್ತನಾಗಿ ಕೆಲಸ ಮಾಡತೊಡಗಿದ. ಅವನ ಸಂಬಳ ವರ್ಧಿಸಿತು. ಮೊದಲಿನಿಂದಲೂ ಮಲ್ಲಪ್ಪ ವರ್ತಮಾನ ಪತ್ರಗಳನ್ನು ಆಸಕ್ತಿಯಿಂದ ಓದುತ್ತಿದ್ದ. ಲೋಕಮಾನ್ಯತಿಲಕರ 'ಕೇಸರಿ' ಇವನ ಮೆಚ್ಚಿನ ಪತ್ರಿಕೆ. ಮಲ್ಲಪ್ಪ ಸ್ನೇಹಜೀವಿ. ಇಪ್ಪತ್ತು ವರ್ಷದ ಪ್ರಾಯಕ್ಕೆ ಅವನ ಸುತ್ತಲೂ ಸ್ನೇಹಿತರ ಬಳಗ ಬೆಳೆಯಿತು. ಹರೆಯ ಕಾಲಿಟ್ಟಾಗ ಮಲ್ಲಪ್ಪನದು ಉಕ್ಕಿನ ಮೈ. ನೀಳದೇಹದ ದಷ್ಟಪುಷ್ಟ ಅಂಗಾಂಗಗಳ ಭವ್ಯವಾದ ಮೈಕಟ್ಟಿನ ಮಲ್ಲಪ್ಪ ನೆಟ್ಟನೆಯ ಮೂಗು, ಬಟ್ಟಲಗಣ್ಣುಗಳ ಸುಂದರ ಯುವಕ ನಾದ. ಗೋದಿ ಬಣ್ಣದ ದೇಹಕ್ಕೆ ಕಣ್ತುಂಬುವ ಆಕರ್ಷಕ ನಿಲುವು. ತುಂಬು ಗಾಂಭೀರ್ಯ, ತೀಕ್ಷ್ಣನೋಟ.

ದಿನವೂ ಗರಡಿಮನೆಯ ವ್ಯಾಯಾಮ ಅವನ ಅಂಗಾಂಗ ಗಳನ್ನು ಬಲಗೊಳಿಸಿತು. ಲಾಠಿ ತಿರುಗಿಸುವಿಕೆ, ಮಲಕಂಭ ಮೊದಲಾದವುಗಳಲ್ಲಿ ಮಲ್ಲಪ್ಪನದು ಎತ್ತಿದ ಕೈ. ಬೆಳಿಗ್ಗೆ ವ್ಯಾಯಾಮ, ಸಿದ್ಧರಾಮನ ಕೆರೆಯಲ್ಲಿ ಈಜಿನ ಸ್ನಾನ, ಸಿದ್ಧೇ

ಶ್ವರನ ದರ್ಶನ–ಪೂಜೆಯ ನಂತರ ನಿತ್ಯದ ಕಾಯಕ. ಸಂಜೆ ಸ್ನೇಹಿತರ ಒಡನಾಟ.

ಮಲ್ಲಪ್ಪನು ಧ್ವನಿಯೂ ಸಿಂಹಗರ್ಜನೆಯಂತೆ. ಒಬ್ಬಂಟಿಯಾಗಿ ಮಲ್ಲಪ್ಪಯಾರ ಕಣ್ಣಿಗೂ ಕಾಣುತ್ತಿರಲಿಲ್ಲ. ಯಾವಾಗಲೂ ಅವನೊಂದಿಗೆ ಕ್ರೀಡಾಪಟುಗಳ ಒಂದು ಗುಂಪು ಇದ್ದೇ ಇರುತ್ತಿತ್ತು. ಅವನು ನಿಂತರೆ ಸುತ್ತಲೂ ಸ್ನೇಹಿತರ ಕೋಟೆ. ನಡೆದರೆ ಎಡಬಲ ಗೆಳೆಯರ ಗುಂಪು.

## ದೀನಬಂಧು

ಶ್ರೀ ಸಿದ್ಧರಾಮನ ಜಾತ್ರೆಯಲ್ಲಿ ನಂದಿಕೋಲು ನಡೆದರೆ ಅವುಗಳ ಮುಂದೆ ಮಲ್ಲಪ್ಪನ ಗುಂಪಿನ ಬಿಸಿರಕ್ತದ ತರುಣರು. ತುಂಬು ಗಾಂಭೀರ್ಯದ ದಿಟ್ಟ ನಡಿಗೆಯ, ಬಹದ್ದೂರ ಗಂಡು ಮಲ್ಲಪ್ಪ ನಂದಿಕೋಲುಗಳ ಮುಂದೆ ವೀರಭದ್ರನಂತೆ ನಡೆದು ಬರುತ್ತಿದ್ದರೆ, ಸುತ್ತಲಿನ ಸಹಸ್ರ ಸಹಸ್ರ ಕಣ್ಣುಗಳಿಂದ ಮೆಚ್ಚುಗೆ, ನಾಲಿಗೆಗಳಿಂದ ಉದ್ಗಾರ ಹೊರಡುತ್ತಿದ್ದುವು.

ಮಲ್ಲಪ್ಪನ ಮೈ ವಜ್ರಕಠಿಣ; ಮನಸ್ಸು ಮೃದುಕುಸುಮ. ಅವನ ವಿಶಾಲವಾದ ಎದೆ ದಯೆ, ಕರುಣೆ, ಪ್ರೀತಿ, ವಿಶ್ವಾಸ, ಸ್ವಾಭಿಮಾನದ ಆಗರ. ಹಬ್ಬ, ಉತ್ಸವ, ಮದುವೆ, ಮೆರವಣಿಗೆಗಳಂತಹ ಕೆಲಸಗಳಲ್ಲಿ ಮಲ್ಲಪ್ಪ ಎಲ್ಲರಿಗೂ ನೆರವಾಗುತ್ತಿದ್ದ. ಅವನಿಲ್ಲದೆ ಸಾರ್ವಜನಿಕ ಮೆರವಣಿಗೆಗಳು ಜರುಗುತ್ತಿರಲಿಲ್ಲ. ಅವನನ್ನು ಬಿಟ್ಟು ಊರಲ್ಲಿ ಯಾವ ಮಹತ್ಕಾರ್ಯವೂ ನಡೆಯುತ್ತಿರಲಿಲ್ಲ. ಅವನಿಲ್ಲದಿದ್ದರೆ ಉತ್ಸವಗಳಿಲ್ಲ, ಜಾತ್ರೆಗಳಿಲ್ಲ, ಮೆರವಣಿಗೆಗಳಿಲ್ಲ ಎನ್ನುವಷ್ಟು ಪ್ರಭಾವಿತ ವ್ಯಕ್ತಿ ಮಲ್ಲಪ್ಪ.



ಮಲ್ಲಪ್ಪನವರು ನ್ಯಾಯ ನಿಷ್ಠುರರು. ಸತ್ಯವಾದಿಗಳು. ಸಮಾಜದಲ್ಲಿಯ ಅನ್ಯಾಯ ಅತ್ಯಾಚಾರ, ಅನಾಚಾರಗಳ ವಿರುದ್ಧ ಸಿಡಿದೇಳುವ ಪೌರುಷ ಅವರದು. ಗಿರಣಿಯ ಮಾಲಿಕರಿಂದ ಕಾರ್ಮಿಕರ ಶೋಷಣೆ, ಶ್ರೀಮಂತರಿಂದ ಕೂಲಿಕಾರರ ಶೋಷಣೆಗಳನ್ನು ಕಂಡು ರೋಷದಲ್ಲಿ ಹಲ್ಲು ಮಸೆಯುತ್ತಿದ್ದರು. ಸೊಲ್ಲಾಪುರದಲ್ಲಿ ಗಿರಣಿಗಳ ಸಂಖ್ಯೆ, ಅಂತೆಯೇ ಕಾರ್ಮಿಕರ ಸಂಖ್ಯೆಯೂ ಜಾಸ್ತಿ. ಕೂಲಿಕಾರರ, ಬಡವರ, ಕಾರ್ಮಿಕರ ಕಣ್ಣೀರಿಗೆ ಕಷ್ಟಗಳಿಗೆ ಮಲ್ಲಪ್ಪನವರು ಓಗೊಟ್ಟರು. ಅವರ ಕಡೆಗಿದ್ದು ಗಿರಣಿಯ ಮಾಲಿಕರಂತಹ ಸಿರಿವಂತರನ್ನೆದುರಿಸಿದರು.

ತಂಟೆ ತಕರಾರುಗಳಿಗೆ ಮಲ್ಲಪ್ಪನವರೇ ಪರಿಹಾರ ಹುಡುಕಿಕೊಡಬೇಕು. ಸಮಸ್ಯೆಗಳೊಂದಿಗೆ ಜನ ಅವರ ಬಳಿ ಬರುವುದು ಹೆಚ್ಚಾಗತೊಡಗಿತು. ಸಿರಿವಂತರ ಮನವೊಲಿಸಿ ಬಡವರ ಸಮಸ್ಯೆ ಬಿಡಿಸುವುದರಲ್ಲಿ ಮಲ್ಲಪ್ಪನವರು ಪ್ರವೀಣರು. ಅವರು ತಮ್ಮ ಸ್ವಂತಕ್ಕಾಗಿ ಅಥವಾ ತಮ್ಮ ಮಡದಿ ಮಕ್ಕಳಿಗಾಗಿ ಎಂದೂ ಯಾರ ಮುಂದೆಯೂ ಕೈ ಚಾಚಲಿಲ್ಲ. ಕೈ ಒಡ್ಡಿದುದಿದ್ದರೆ ಅದು ಸಿದ್ಧೇಶ್ವರ ಭಜನಾಮಂಡಳ, ಶ್ರದ್ಧಾನಂದ ಸಮಾಜ, ಗಣಪತಿ ಉತ್ಸವ ಮಂಡಳ, ಲಾಠಿ ಸಂಘ ಮೊದಲಾದ ಸಾರ್ವಜನಿಕ ಕಾರ್ಯಗಳ ಪೋಷಣೆಗಾಗಿ.

ಇವರ ವ್ಯಾಯಾಮಸಂಘದ ತರುಣರೆಲ್ಲರೂ ಕಟ್ಟಾ ಹಿಂದೂ ಧರ್ಮಾಭಿಮಾನಿಗಳು, ದೇಶಾಭಿಮಾನಿಗಳು. ಧರ್ಮ ಮತ್ತು ದೇಶ ರಕ್ಷಣೆಗಾಗಿ ಟೊಂಕಕಟ್ಟಿ ನಿಲ್ಲುವ ಹನಣಿಕೆ ಅವರದು.

೧೯೨೭ರಲ್ಲಿ ಹಿಂದೂಗಳ ಮೆರವಣಿಗೆಯೊಂದು ಊರಲ್ಲಿಯ ಪ್ರಮುಖ ಬೀದಿಗಳಲ್ಲಿ ಹೊರಟಿತು. ಮೆರವಣಿಗೆ ಎಂದರೆ ಮಲ್ಲಪ್ಪನವರು ಅದರಲ್ಲಿ ಪಾಲ್ಗೊಂಡಿದ್ದರು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅದು ತನ್ನ ಸಕಲ ವೈಭವದೊಂದಿಗೆ ಸರಾಫಕಟ್ಟಿಗೆ ಬಂದಾಗ ಮುಸಲ್ಮಾನರು ತಮ್ಮ ಮೋಹರಮ್ ಹುಲಿಯನ್ನು ಮೆರವಣಿಗೆಯಲ್ಲಿ ನುಗ್ಗಿಸಿ ಜಗಳಕ್ಕೆ ಕರೆಕೊಟ್ಟರು. ಮೆರವಣಿಗೆಯಲ್ಲಿಯ ಜನ ಗಾಬರಿಯಾದರು. ಹಲಗೆ, ಬಾಜಿ, ಓಲಗಗಳ ಸದ್ದು ಅಡಗಿತು. ಮಲ್ಲಪ್ಪನವರು ಮುಸಲ್ಮಾನ ಮಿತ್ರರಿಗೆ ವಿನಯವಾಗಿಯೇ ಇದೆಲ್ಲ ನಿಲ್ಲಿಸುವಂತೆ ತಿಳಿಸಿ ಹೇಳಿದರು. ಆದರೆ ಅವರು ವಿನಯಕ್ಕೆ ತಲೆಬಾಗಲಿಲ್ಲ. ಸ್ನೇಹಕ್ಕೆ ಸಹಕರಿಸಲಿಲ್ಲ. ಮಲ್ಲಪ್ಪನವರ ತಾಳ್ಮೆ ಕುಸಿಯಿತು. ಹರೆಯದ ಬಿಸಿರಕ್ತ ಕುದಿಯಿತು. ಆ ಹುಲಿಯಾದವನನ್ನು ಹಿಡಿದು ಚೆನ್ನಾಗಿ ಥಳಿಸಿದರು.

ಅಂದಿನಿಂದ ಕೆಲ ಮುಸಲ್ಮಾನರಿಗೆ ಮಲ್ಲಪ್ಪನವರ ಮೇಲೆ ರೋಷ ಬೆಳೆಯತೊಡಗಿತು. ಹಾಗೆ ನೋಡಿದರೆ ಮಲ್ಲಪ್ಪನವರು ಸ್ವಾರ್ಥಕ್ಕಾಗಿ ಅವರಿಗೆ ಎದುರು ಬಿದ್ದಿರಲಿಲ್ಲ; ಸಾರ್ವಜನಿಕ ಹಿತಕ್ಕಾಗಿ ಅವರನ್ನು ಎದುರಿಸಿದ್ದರು. ಆದರೂ ಅಂದಿನಿಂದ ಹಲವು ಮುಸಲ್ಮಾನರು ಮಲ್ಲಪ್ಪನ ಮೇಲೆ ವೈರಸಾಧಿಸಲು ಪ್ರಾರಂಭಿಸಿದರು.

ಮಲ್ಲಪ್ಪನವರಿಗೆ ಮುಸಲ್ಮಾನರಲ್ಲಿಯೂ ಜೀವಕ್ಕೆ ಜೀವ ಕೊಡುವ ಅನೇಕ ಸ್ನೇಹಿತರಿದ್ದರು. ಅಬ್ದುಲ್ ರಸೂಲ, ಕುರ್ಬಾನ ಹುಸೇನ ಮೊದಲಾದವರಿಗೆ ಕಾರ್ಮಿಕ ಮುಖಂಡ ಮಲ್ಲಪ್ಪನವರೆಂದರೆ ಪಂಚಪ್ರಾಣ. ತಮ್ಮ ಪ್ರಾಣವನ್ನೇ ಮಲ್ಲಪ್ಪನವರಿಗಾಗಿ ಮುಡಿಪಾಗಿಟ್ಟ ಮುಸ್ಲಿಂ ಮಿತ್ರರಿವರು.



ಹೀಗೆ ಮಲ್ಲಪ್ಪನವರು ಹಿಂದೂಗಳ ಏಕೈಕ ನೇತಾರರಾದರು. ಕಾರ್ಮಿಕರ, ಕೂಲಿಕಾರರ ಮುಖಂಡರಾದರು. ಅನಾಥರ, ಬಡವರ ಮುಖಂಡರಾದರು. ಸೊಲ್ಲಾಪುರದ ಮನೆ ಮನೆಗಳಲ್ಲಿ ಮಲ್ಲಪ್ಪನವರ ಹೆಸರು ನಲಿದಾಡತೊಡಗಿತು.

## ಕಾಂಗ್ರೆಸ್ಸಿಗೆ ಪ್ರವೇಶ

ಕ್ರಿ. ಶ. ೧೯೧೮ರ ಸುಮಾರಿನಲ್ಲಿ ಭಾರತದಲ್ಲಿ ಸ್ವಾತಂತ್ರ್ಯದ ಬೇಡಿಕೆ ಪ್ರಾರಂಭವಾಯಿತು. ಎಲ್ಲೆಡೆಯಲ್ಲಿಯೂ ರಾಷ್ಟ್ರೀಯ ಕಾಂಗ್ರೆಸ್ಸಿನ ಸಂಘಟನೆಗಾಗಿ ತೀವ್ರ ಚಟುವಟಿಕೆಗಳು ಪ್ರಾರಂಭವಾದವು. ಸಭೆ, ಚರ್ಚೆಗಳು ನಡೆಯತೊಡಗಿದವು. ಲೋಕಮಾನ್ಯ ತಿಲಕ, ಮಹಾತ್ಮಾ ಗಾಂಧೀಜಿಯವರಂಥ ಮುಖಂಡರ ಮಾರ್ಗದರ್ಶನದಲ್ಲಿ ಜನ ಒಂದುಗೂಡತೊಡಗಿದರು. ಉಗ್ರಗಾಮಿಗಳು ಗದ್ದಲವೆಬ್ಬಿಸತೊಡಗಿದರು. ಅವರ ದಂಗೆ, ಗದ್ದಲಗಳಿಂದ ಆಳರಸರು ಅಸಮಾಧಾನಗೊಂಡರು. ತಮ್ಮ ಆಡಳಿತವನ್ನು ಬಿಗಿಗೊಳಿಸಿದರು. ನರಿಯ ಯುಕ್ತಿ ಸಾಧಿಸಿದರು. ಭಾರತದಲ್ಲಿ ಮುಸಲ್ಮಾನರನ್ನು ಹಿಂದೂಗಳ ವಿರುದ್ಧ ಹುರಿದುಂಬಿಸಿ ಜಾತೀಯ ದಂಗೆಗಳಿಗೆ ಅಡಿಪಾಯ ಹಾಕತೊಡಗಿದರು. ಹಿಂದೂ ಉಗ್ರಗಾಮಿಗಳಂತೆ ಮುಸ್ಲಿಂ ಜಾತಿಯ ಉಗ್ರಗಾಮಿಗಳ ಸಂಘಟನೆಗಳಿಗೂ ಇದರಿಂದ ಪ್ರಚೋದನೆ ದೊರೆಯಿತು.

ದೇಶದ ಎಲ್ಲೆಡೆಯಲ್ಲಿಯ ಶಾಂತಿ ತತ್ತರಿಸಿತು. ಜಗಳ, ದಂಗೆಗಳು ತಲೆ ಎತ್ತಿದವು. ಜನಜೀವನ ಅಸ್ತವ್ಯಸ್ತವಾಯಿತು.

ದೇಶದ ತುಂಬೆಲ್ಲ ಹಾಹಾಕಾರ. ಹಿಂದೂ ಮುಸಲ್ಮಾನರ ದಂಗೆ
ಗಳು, ಸ್ವಾತಂತ್ರ್ಯಕ್ಕಾಗಿ ಬಡಿದಾಟಗಳು ಜನಜೀವನದಲ್ಲಿ ಕಳ
ವಳ, ಹೆದರಿಕೆ, ಸ್ವಾಭಿಮಾನಗಳನ್ನು ಪುಟಿಸಿದವು.

ಸೊಲ್ಲಾಪುರ ಹಿಂದಿನಿಂದಲೂ ಸ್ವಾಭಿಮಾನಕ್ಕೆ ಹೆಸರಾ
ದುದು. ಇಲ್ಲಿಯೂ ಜಾತೀಯ ಗಲಭೆಯ ಗಾಳಿ ಬೀಸಿತು. ಬಹು
ಬೇಗ ಆ ಜ್ವಾಲೆ ಇಡೀ ಊರನ್ನು ತನ್ನ ಬಾಹುಗಳಲ್ಲಿ ಎಳೆದು
ಕೊಳ್ಳತೊಡಗಿತು.

೧೯೨೪ರಲ್ಲಿ ನಡೆದ ದಂಗೆಯಲ್ಲಿ ಹಲವಾರು ಜನ ಸತ್ತರು.
ನೂರಾರು ಜನ ತೀವ್ರ ಗಾಯಗೊಂಡರು. ಹಿಂದೂಗಳು ಮರುಗಿ
ದರು. ಸುಮ್ಮನಿದ್ದರೆ ಸಾವು ಖಚಿತ ಎಂದು ಅರಿವುಂಟಾದಾಗ
ಊರಿನ ಪ್ರಮುಖರು ಮಲ್ಲಪ್ಪನವರನ್ನು ಕರೆಯಿಸಿ ಆಪ್ತಾ
ಲೋಚನೆ ನಡೆಸಿದರು.

ಡಾಕ್ಟರ್ ಜಗದೇವಪ್ಪ, ಶಿವಬಾಳಪ್ಪನಂತಹ ಪ್ರಮುಖರು
ಮಲ್ಲಪ್ಪನವರನ್ನು ಒಪ್ಪಿಸಿ ಹಿಂದೂ ಸಂಘಟನೆಗೆ ಕಂಕಣ ಬದ್ಧ
ರಾದರು. ಸಹಸ್ರ ಸಹಸ್ರ ಜನರನ್ನು ತಮ್ಮೆಡೆಗೆ ಸೆಳೆವ ಮಾತು
ಗಾರಿಕೆ ಅವರದು. ಹಿಂದೂಗಳೂ ಮುಸಲ್ಮಾನರು ವಿರೋಧಿ
ಗಳಲ್ಲ. ಹಿಂದೂ ಮುಸ್ಲಿಂ ಭಾಯಿ ಭಾಯಿ. ಅವರೊಂದಿಗೆ
ನಮಗೆ ಸಹಬಾಳ್ವೆ ಬೇಕು. ಸ್ನೇಹಕ್ಕೆ ಸ್ನೇಹ. ಪ್ರೀತಿಗೆ ಪ್ರೀತಿ
ನಮ್ಮ ಧ್ಯೇಯ. ಆದರೆ ಅನ್ಯಾಯವಾಗಿ ಅವರು ಹಿಂದೂಗಳ
ಮೇಲೆ ಮುಗಿದು ಬಿದ್ದರೆ ನಾವು ಸುಮ್ಮನೆ ಬಿಡುವವರಲ್ಲ ಎಂದು
ಮಲ್ಲಪ್ಪನವರು ಮುಸಲ್ಮಾನ ಬಾಂಧವರಿಗೆ ತಿಳಿಸಿ ಹೇಳಿದರು.



ಹಿಂದೂ ಮುಸ್ಲಿಂ ದಂಗೆಗಳೇ ಮಲ್ಲಪ್ಪನವರ ಉದ್ದೇಶ
ಎಂದೂ ಆಗಿರಲಿಲ್ಲ. ಬದಲಾಗಿ ಜಾತೀಯ ಗಲಭೆಗಳನ್ನು ಸಾಧ್ಯ
ವಾದಷ್ಟು ಸದೆಬಡಿದು ಭಾರತೀಯರೆಲ್ಲ ಒಂದಾಗಿ ಬ್ರಿಟಿಷರ
ವಿರುದ್ಧ ಹೋರಾಡಲು ಅವರು ಹವಣಿಸುತ್ತಿದ್ದರು. ಸಾಧ್ಯವಾ
ದಷ್ಟು ಹಿಂದೂ ಮುಸ್ಲಿಂ ದ್ವೇಷಜ್ವಾಲೆಗಳನ್ನು ಆರಿಸಿ ದೇಶದ
ಸ್ವಾತಂತ್ರ್ಯ ಸಾಧನೆಯತ್ತ ಗಮನ ಹರಿಸಿದರು.

ಕ್ರಿ. ಶ. ೧೯೨೯ರ ಒಂದು ರಾತ್ರಿ ಟಿಳಕ ಚೌಕ ಜನರಿಂದ
ಕಿಕ್ಕಿರಿಯಿತು. ಭವ್ಯ ವೇದಿಕೆಯ ಮೇಲೆ ನಿಂತು ಭಾಷಣಮಾಡು
ತ್ತಿದ್ದ ರಾಜಾಜಿಯವರ ಮಾತುಗಳು ಜನತೆಯನ್ನು ಬಡಿದೆಬ್ಬಿ
ಸಿದುವು. ನವತರುಣರೆದೆಯಲ್ಲಿ ರಾಷ್ಟ್ರಾಭಿಮಾನ ಉಕ್ಕಿಸಿದುವು.
ಅದೇ ಸಂದರ್ಭದಲ್ಲಿ ಅವರು ಮಲ್ಲಪ್ಪ ಧನಶೆಟ್ಟಿಯವರನ್ನು
ಕಾಂಗ್ರೆಸ್ಸಿಗೆ ಹೃತ್ಪೂರ್ವಕವಾಗಿ ಸ್ವಾಗತಿಸಿದರು. ಜನಸಂದಣಿ
ಹರ್ಷಧ್ವನಿಗೈಯ್ಯಿತು. ಸಭೆಯಲ್ಲಿ ಉತ್ಸಾಹ ಶಿಖರಕ್ಕೇರಿತು.
ತರುಣರು ಎದ್ದು ಕುಣಿದರು. ಕರವಸ್ತ್ರ ಹಾರಿಸಿದರು. ಸಂತೋ
ಷದ ಮಿಶ್ರ ಸ್ವರಗಳಿಂದ ಸಭೆ ಕೆಲವು ನಿಮಿಷ ಅಲ್ಲೋಲ
ಕಲ್ಲೋಲವಾಯಿತು.

ಮಲ್ಲಪ್ಪ ಧನಶೆಟ್ಟಿಯವರು ತಮ್ಮ ಎಂದಿನ ರಾಜಗಾಂಭೀ
ರ್ಯದಿಂದ ಎದ್ದು ಬಂದು ರಾಜಾಜಿಯವರಿಗೆ ವಂದಿಸಿ ಒಪ್ಪಿಗೆ
ಸೂಚಿಸಿದರು. ಇಬ್ಬರ ಸ್ನೇಹ ಹಸ್ತಗಳು ಒಂದುಗೂಡಿದವು.
ಅಲ್ಲಿಯವರೆಗೆ ಉಗ್ರಗಾಮಿಯಾಗಿದ್ದ ಮಲ್ಲಪ್ಪನವರ ತಲೆಯ
ಮೇಲೆ ಗಾಂಧೀಜಿ ಟೋಪಿ ಶೋಭಿಸಿ ಅವರನ್ನು ಸೌಮ್ಯವಾದಿ
ಯನ್ನಾಗಿಸಿತು. ಸೊಕ್ಕಿದ ಹರೆಯದ, ಬಿಸಿರಕ್ತದ ಮಲ್ಲಪ್ಪ

ನವರು ಶಾಂತಿ, ಅಹಿಂಸೆಗಳ ದಾರಿಯೆಡೆಗೆ ತಿರುಗಿದರು. ದ್ವೇಷಕ್ಕೆ ದ್ವೇಷ, ರಕ್ತಕ್ಕೆ ರಕ್ತ, ಸೇಡಿಗೆ ಸೇಡು ಎನ್ನುತ್ತಿದ್ದವರು ಸತ್ಯಾಗ್ರಹ, ಅಹಿಂಸೆಗಳನ್ನೇ ಎಲ್ಲಕ್ಕೂ ಬಳಸಿಕೊಳ್ಳಲು ಅನುವಾದರು. ಮಲ್ಲಪ್ಪನವರನ್ನು ರಾಷ್ಟ್ರೀಯ ಕಾಂಗ್ರೆಸ್ಸಿಗೆ ಸೇರಿಸಿಕೊಂಡ ಶ್ರೇಯಸ್ಸು ರಾಜಾಜಿಯವರದು. ಅಂದಿನಿಂದ ಮಲ್ಲಪ್ಪನವರು ಕಾಂಗ್ರೆಸ್ಸಿನ ಕಟ್ಟುನಿಟ್ಟಿನ ಹುರಿಯಾಳಾದರು. ಕಾಂಗ್ರೆಸ್ ತತ್ವಗಳಿಗೆ ಕಂಕಣ ಬದ್ಧರಾದರು. ಶಾಂತಿ ಅವರ ನಿತ್ಯ ಮಂತ್ರವಾಯಿತು. ಸಹನೆ ಅವರ ತಾರುಣ್ಯಕ್ಕೆ ಸಂಯಮವಾಯಿತು. ಅಹಿಂಸೆ, ತಾಳ್ಮೆ, ದಯೆ, ಕರುಣೆಗಳಂತಹ ಮಾನವೀಯ ಮೌಲ್ಯಗಳ ದಾರಿಯಲ್ಲಿ ಅವರು ದಿಟ್ಟ ಹೆಜ್ಜೆಗಳನ್ನಿಟ್ಟು ನಡೆಯತೊಡಗಿದರು.

## ಪ್ರಥಮ ಸತ್ಯಾಗ್ರಹ

ಪರಕೀಯರ ಆಡಳಿತದಡಿಯಲ್ಲಿ ನಮ್ಮವರ ಬದುಕಿನ ದಿನಗಳು ಆಮೆ ವೇಗದಲ್ಲಿ ಮುಂದೆ ಸಾಗಿದ್ದುವು. ನಿಸರ್ಗ ರಮ್ಯವಾದ ನಮ್ಮ ಹಳ್ಳಿಗಳು, ಸುಂದರವಾದ ನಮ್ಮ ನಗರಗಳು, ಅದ್ಭುತವಾದ ಭವ್ಯ ಪರಂಪರೆಗಳೆಲ್ಲವೂ ನಮ್ಮದಾಗಿಯೂ ನಮ್ಮವೆಂದೆನ್ನಿಸಿಕೊಳ್ಳಲಾರದವುಗಳಾಗಿದ್ದುವು. ಎಲ್ಲದರ ಮೇಲೆ ಬ್ರಿಟಿಷರ ಆಡಳಿತದ ಹದ್ದಿನ ಕಣ್ಣು. ತನ್ಮತನವನ್ನು ಅಡಗಿಸಿಟ್ಟು ಪಾರತಂತ್ರ್ಯದ ನೆರಳಿಗೆ ಕೊರಳು ಚಾಚುವ ಸಂದರ್ಭ ಅಂದಿನದು.

ಸೊಲ್ಲಾಪುರ ಇದಕ್ಕೆ ಹೊರತಾಗಿರಲಿಲ್ಲ. ಶರಣ ಸಿದ್ಧರಾಮನ ಕನಸಿನ ಸೊಗಸಿನ ನಗರ ಅದು. ಒಂದೆಡೆ ಐತಿಹಾಸಿಕ



ಕಪ್ಪುಕಲ್ಲಿನ ಕೋಟೆಯಿಂದಾವೃತವಾದ ಸುಂದರ ಪಟ್ಟಣ. ಊರ ಕೊನೆಯಲ್ಲಿ ಸಿದ್ಧರಾಮನ ವಿಶಾಲಮಂದಿರ. ಸುತ್ತ ನಾಲ್ಕೂ ನಿಟ್ಟಿನಲ್ಲಿ ತಿಳಿನೀರಿನ ಪುಟ್ಟ ಪುಟ್ಟ ತೆರೆಗಳಿಂದ ಕಲಕಲಿಸುವ ಚಿತ್ತಮೋಹಕವಾದ ಕೆರೆ. ಅದು ಸಾಧಾರಣ ಕೆರೆಯಲ್ಲ. ಸ್ವತಃ ಸಿದ್ಧರಾಮನೇ ನಿಂತು ಕಟ್ಟಿಸಿದ ಭವ್ಯ ಕೆರೆ ಅದು.

ರಮಣೀಯವಾದ ಕೆರೆ ಮೊದಲು ಊರ ಹೊರಗಿದ್ದದ್ದು ಊರು ಬೆಳೆದು ಈಗ ಊರಿನ ಮಧ್ಯಭಾಗದಲ್ಲಿ ಸೇರಿಬಿಟ್ಟಿದೆ. ಬೆಳಿಗ್ಗೆ ದೇವಸ್ಥಾನದ ದಾರಿಯಲ್ಲಿ ಮಿಂದು ಮಡಿಯುಟ್ಟು ವಿಭೂತಿ ಧರಿಸಿ, ತೆಂಗು, ಹೂಗಳ ಬುಟ್ಟಿಹಿಡಿದು ಶಿವಮಂತ್ರ ಪಠಿಸುತ್ತ ಬರುವ ಭಕ್ತರ ಸಂಖ್ಯೆ ಸಹಸ್ರ ಸಹಸ್ರ.

ಇಂಥ ಸೊಬಗಿನ ದೃಶ್ಯಕ್ಕೆ ಯಾರ ದೃಷ್ಟಿ ತಾಕಿತೋ, ಯಾವ ಕೆಟ್ಟ ಕಣ್ಣು ಬಡಿಯಿತೋ. ಅಂದಿನ ಕಲೆಕ್ಟರ ಸಿನ್‌ಕಾಕ್ಸ್‌ನ ವಕ್ರದೃಷ್ಟಿ ಹರಿಯಿತು. ದೇವಸ್ಥಾನದ ಮಹತ್ವಕ್ಕೆ ಕುಂದು ತರುವ ಉಪಾಯ ತಲೆ ಕೊರೆಯಿತು. ಕೆರೆಯ ನೀರಿನಿಂದ ಜನರ ಆರೋಗ್ಯಕ್ಕೆ ಹಾನಿ ಎಂದು ಅಧಿಕಾರಿಗಳು ವರದಿ ಸಲ್ಲಿಸಿದರು. ತಕ್ಷಣ ಸಿನ್‌ಕಾಕ್ಸ್‌ನು ಕೆರೆಯನ್ನು ಒಡೆದು ಪಕ್ಕದಲ್ಲಿಯ ಕೋಟೆಯ ಕಂದಕಕ್ಕೆ ನೀರನ್ನು ತಿರುಗಿಸಲು ಸೂಚನೆ ನೀಡಿದ. ಇನ್ನೂರು ಹೆಕ್ಟೇರು ಭೂಮಿ ಬರಿದಾದ ಬಳಿಕ ಅಂಗಡಿಗಳಿಗಾಗಿ ಆ ಸ್ಥಳವನ್ನು ಹರಾಜು ಹಾಕುವ ಯೋಜನೆ ಸಿದ್ಧವಾಯಿತು.

ಗಾಳಿಯೊಂದಿಗೆಯೇ ತೀವ್ರವಾಗಿ ಈ ಸುದ್ದಿ ಊರಲ್ಲಿ ಹರಿದಾಡಿತು. ಮನೆ ಮನೆ, ಗುಡಿಸಲು ಗುಡಿಸಲುಗಳಲ್ಲಿಯ ಹಿಂದೂ

ಗಳು ತಲ್ಲಣಿಸಿದರು. ಸಿದ್ಧರಾಮನ ಭಕ್ತ ಮಲ್ಲಪ್ಪನ ನೇತೃತ್ವದಲ್ಲಿ ಸಂಘಟಿತರಾದರು. ಸ್ತ್ರೀ–ಪುರುಷರು, ಮಕ್ಕಳು, ವೃದ್ಧರೆಲ್ಲ ಕೆರೆಯ ರಕ್ಷಣೆಗೆ ಟೊಂಕಕಟ್ಟಿ ನಿಂತರು. ಸಹಸ್ರಾರು ವರ್ಷಗಳಿಂದ ಬೆಳೆದುಬಂದಿದ್ದ ಹಿಂದುಗಳ ಧಾರ್ಮಿಕ ನಂಬುಗೆಯ ತಳಹದಿಗೆಯೇ ಆ ಕಲೆಕ್ಟರ್ ಕೊಡಲಿ ಹಾಕುವ ಹವಣಿಕೆಯಲ್ಲಿದ್ದ. ಇದನ್ನು ಧಾರ್ಮಿಕರಾದ ಹಿಂದುಗಳು ಸಹಿಸದಾದರು.

ಕೆರೆಯನ್ನು ಒಡೆಯಲು ನಿಗದಿಪಡಿಸಿದ ದಿನದ ಹಿಂದಿನ ರಾತ್ರಿ ಮಲ್ಲಪ್ಪನ ನಿರ್ದೇಶನದಂತೆ ಊರ ಗಂಡು, ಹೆಣ್ಣು, ಮಕ್ಕಳು, ಮುದುಕರೆಲ್ಲ ಕೆರೆಯ ದಂಡೆಯ ಮೇಲೆ ಬಂದು ನೆರೆದರು. ಆ ರಾತ್ರಿ ಊರಿನ ಮನೆಗಳು ಭಣಗುಟ್ಟಿದವು. ಬೀಗ ಹಾಕಿದ ಬಾಗಿಲುಗಳು ಮೌನ ಆಚರಿಸಿದುವು. ಸಂತಾಪ, ಆಕ್ರೋಶ, ದುಃಖ, ಕಳವಳಗಳಲ್ಲಿ ಅಂದಿನ ರಾತ್ರಿ ತತ್ತರಿಸಿ ಹಿಂಜರಿಯಿತು. ಬೆಳಗು ಹೆದರುತ್ತಲೇ ಬೆಳಕು ತೂರಿತು.

ಊರಲ್ಲಿಯ ಎಲ್ಲನಾ ಭಜ ಮಂಡಳಿಗಳ ವಾದ್ಯಗಳು ಅಲ್ಲಿ ದನಿಗೈದು ಸಿದ್ಧರಾಮನನ್ನು ಪ್ರಾರ್ಥಿಸಿದುವು. ಸಹಸ್ರ ಸಹಸ್ರ ಜನರು ಗಂಡುಗಚ್ಚೆ ಬಿಗಿದು ಬರಿಮೈಯಿಂದ, ಬರಿಗೈಯಿಂದ ಅಹಿಂಸಾವಾದಿ ಮಲ್ಲಪ್ಪನವರ ನೇತೃತ್ವದಲ್ಲಿ ಸತ್ಯಾಗ್ರಹಕ್ಕೆ ಸನ್ನದ್ಧರಾದರು. "ಮೈಯಲ್ಲಿಯ ರಕ್ತ ಸೋರಿ ಹೋಗಲಿ. ಆದರೆ ಈ ಕೆರೆಯ ಒಂದು ಹನಿ ನೀರನ್ನೂ ಸೋರಿ ಹೋಗಲು ನಾವು ಬಿಡುವದಿಲ್ಲ" ಎಂಬುದು ಅವರೆಲ್ಲರ ದೃಢ ನಿಲುವು.

ಬಂದೂಕಧಾರಿ ಪೊಲೀಸರ ದೊಡ್ಡ ಪಡೆ ಬಂದಿತು. ಸತ್ಯಾಗ್ರಹಿಗಳನ್ನು ಎಬ್ಬಿಸಲು ಮುಂದಾಯಿತು.ಆದರೆ ಮಲ್ಲಪ್ಪ ಮತ್ತು



ಸಂಗಡಿಗರು ನೆಲಬಿಟ್ಟು ಕದಲಲಿಲ್ಲ. "ನಮ್ಮನ್ನು ಮೊದಲು ಕೆರೆಯಲ್ಲಿ ಹಾಕಿರಿ, ಆಮೇಲೆ ಕೆರೆ ಒಡೆಯಿರಿ" ನಾವು ಇಲ್ಲಿಂದ ಒಂದಂಗುಲವೂ ಕದಲುವುದಿಲ್ಲ. ಹಿಂದೆ ಹೆಜ್ಜೆ ಇಡುವದಿಲ್ಲ ಎಂಬುದು ಅವರ ಉತ್ತರ.

ರೊಚ್ಚಿಗೆದ್ದ ಜನಸಮೂಹದ ಸಂದೇಶ ಗವರ್ನರ್ ಸಾಯಿಕ್ಸ ಫ್ರೆಡ್ರಿಕ್ಸನರಿಗೆ ಮುಟ್ಟಿತು. ಬೇರೆ ದಾರಿ ಕಾಣದೆ "ಕೆರೆ ಮುಚ್ಚಿಸುವ ಯೋಜನೆಯನ್ನು ಸರ್ಕಾರ ಶಾಶ್ವತವಾಗಿ ಕೈಬಿಟ್ಟದೆ" ಎಂದು ಬೊಂಬಾಯಿಯಿಂದ ವೈರ್‌ಲೆಸ್ ಕಳಿಸಿದ.

ಸರ್ಕಾರದ ಈ ಸೋಲಿನ ದನಿ ಕೇಳಿ ಕೆರೆಯ ನೀರು ಕಿಲಕಿಲನೆ ನಕ್ಕಿತು. ದಂಡೆಯ ಮೇಲೆ ಕುಳಿತ ಜನಸಮೂಹ ಎದ್ದು ನಿಂತು ಸಿದ್ಧರಾಮನ ಜಯಘೋಷಮಾಡಿತು.

ಇದು ಮಲ್ಲಪ್ಪನವರು ಸಂಯೋಜಿಸಿದ ಸತ್ಯಾಗ್ರಹದ ಪ್ರಥಮ ಯಶಸ್ಸು. ಅಹಿಂಸೆಯ ಮಾರ್ಗದಲ್ಲಿ ಅವರು ಸಾಧಿಸಿದ ಪ್ರಪ್ರಥಮ ವಿಜಯ.

"ಸ್ವರಾಜ್ಯ ನಮ್ಮ ಧ್ಯೇಯ. ಅಹಿಂಸೆಯಿಂದಲೇ ಅದನ್ನು ಪಡೆಯುತ್ತೇವೆ" ಎಂದು ಭಾರತೀಯರು ಘೋಷಿಸಿದರು. ಜನವರಿ ೨೬, ೧೯೩೦ರಂದು ಈ ಘೋಷಣೆ ದೇಶದ ತುಂಬೆಲ್ಲ ಪ್ರಸರಿಸಿತು. ೧೯೩೦ರ ಮಾರ್ಚ ೧೨ರಂದು ಗಾಂಧೀಜಿ ದಂಡಿ ಯಾತ್ರೆ ಪ್ರಾರಂಭಿಸಿದರು. ಭಾರತದ ಪ್ರತಿ ಪಟ್ಟಣ, ಹಳ್ಳಿಗಳಲ್ಲೆಲ್ಲ ಉಪ್ಪಿನ ಸತ್ಯಾಗ್ರಹ, ಚಳುವಳಿಗಳು ನಡೆದವು.

## ಸ್ವಾತಂತ್ರ್ಯಾಂದೋಲನದ ಕಿಡಿ

ಒಂದು ದಿನವೂ ಸಂಪೂರ್ಣವಾಗಿ ಶಾಂತರೀತಿಯಿಂದ ಕೊನೆಗೊಳ್ಳಲಾರದ ದಿನಗಳವು. ದಿನದಿನವೂ ದೇಶದ ನಾನಾ

ಭಾಗಗಳಿಂದ ನಾನಾ ತರದ ಸುದ್ದಿಗಳು ಕಾಳ್ಗಿಚ್ಚಿನಂತೆ ಹಬ್ಬುತ್ತಿದ್ದವು; ದೂರದಿಂದ ಬರುವ ಸುದ್ದಿಗಳಿಗಾಗಿ, ಸಂದೇಶಗಳಿಗಾಗಿ ಸೊಲ್ಲಾಪುರದ ಕಾಂಗ್ರೆಸ್ ಜನತೆಯು ಕಾತರದಿಂದ ಕಾಯುವಿಕೆ.

ಇಂಥದೇ ದಿನಗಳಲ್ಲಿ ಒಂದು ದಿನ ಸುದ್ದಿಯೊಂದು ಬರಸಿಡಿಲಿನಂತೆ ಸೊಲ್ಲಾಪುರದ ಜನತೆಯ ಮೇಲೆರಗಿತು. ೧೯೩೦ರ ಮೇ ೫ ರಂದು ಮಹಾತ್ಮಾ ಗಾಂಧೀಜಿಯರ ಬಂಧನದ ಸುದ್ಧಿ. ಆರನೆಯ ದಿನಾಂಕದಂದು ಭಾರತದ ಪ್ರತಿ ಹಳ್ಳಿಗೂ ಈ ವಿಷಯ ಕಾಡುಕಿಚ್ಚಿನಂತೆ ಹಬ್ಬಿತು.

ಟಿಳಕ ಚೌಕಿನಲ್ಲಿ ರಾಮಕೃಷ್ಣ ಬಾಬೂಜಿಯರ ಅಧ್ಯಕ್ಷತೆಯಲ್ಲಿ ಮಲ್ಲಪ್ಪ ಬೃಹತ್‌ಸಭೆ ಸೇರಿಸಿದ. ಜಗದೇವರಾವ ದೇಶಮುಖ, ರಾಮ್‌ಭಾವು ರಾಜವಾಡೆ, ಗುಲಾಬಚಂದ ಜೋಶಿ, ಚೆನ್ನಬಸಪ್ಪ ವಾಂಗಿ, ಕುರ್ಬಾನ ಹುಸೇನ, ತುಲಸಿದಾಸ ಜಾಧವ, ಡಾ|| ಅಂತ್ರೋಳಿಕರ ಮೊದಲಾದ ಮುಖಂಡರು ವೈನವಿರೇಳುವಂತೆ ಭಾಷಣ ಮಾಡಿದರು. ಸುಸಂಘಟಿತರಾಗಿ ಸರ್ಕಾರದ ವಿರುದ್ಧ ಬಂಡೇಳಲು ಜನತೆಗೆ ಕರೆ ನೀಡಿದರು. ಹಿಂದೂ ಮುಸ್ಲಿಂ ಜಾತೀಯ ವೈರತ್ವ ಮರೆಯಾಗಿ ಎಲ್ಲರಲ್ಲಿ ರಾಷ್ಟ್ರೀಯ ಭಾವನೆ ಅಂಕುರಿಸಿತು. ಅವರು ಮತ್ತೆ ಸಹೋದರರಂತೆ ಒಂದಾದರು. ಸರ್ಕಾರದ ವಿರುದ್ಧ ಸಿಡಿದೆದ್ದರು.

ಗಾಂಧೀಜಿಯವರ ತತ್ವಗಳಲ್ಲಿ ಪಾನನಿರೋಧವೂ ಒಂದು. ಮಲ್ಲಪ್ಪನವರ ಬಂಟರು ಒಂದು ಬೆಳಿಗ್ಗೆ ಈಚಲು ಮರಗಳನ್ನು (ಸೇಂದಿಗಿಡ) ಕಡಿಯುವ ಹಂಚಿಕೆ ಹೂಡಿದರು. ಸೊಲ್ಲಾಪುರದ ಉತ್ತರದಲ್ಲಿ ತುಳಜಾಪುರಕ್ಕೆ ಹೋಗುವ ದಾರಿಯಬಳಿ ಸೇಂದಿಯ



ನಿಬಿಡವಾದ ಬನ. ಸೇಂದಿ ಗುತ್ತೇದಾರರು ಮಣ್ಣಿನ ಕೊಡಗಳನ್ನು ಕಟ್ಟಿ ಸೇಂದಿ ಹರಿಯಲು ಅನುವು ಮಾಡಿದ್ದರು. ಬನದ ಬಳಿ ಬಂದ ಜನಸಮೂಹ ಒಂದು ನಿಮಿಷ ತಡೆಯಿತು. ಎವೆ ಮುಚ್ಚಿ ತೆರೆಯುವಷ್ಟರಲ್ಲಿ ಸಶಬ್ದವಾಗಿ ಮರಗಳು ನೆಲಕ್ಕುರುಳಿದವು. ಮರಕ್ಕೆ ಕಟ್ಟಿದ ಮಡಿಕೆಗಳೂ ಒಡೆದು ಸೇಂದಿಯ ಬಿಳಿಯ ಪಾನೀಯ ನೆಲಕ್ಕೆ ಹರಿದು ಹೊಲಸು ವಾಸನೆ ಬಿತ್ತರಿಸಿತು. ಸೇಂದಿ ತುಂಬಿದ ಡ್ರಮ್ಮುಗಳನ್ನು ಉರುಳಿಸಿದರು.

ಸೇಂದಿ ಮರಗಳ ಗುತ್ತೇದಾರ ಓಡಿಹೋಗಿ ಪಕ್ಕದಲ್ಲಿದ್ದ ವಾಟರ್ ವರ್ಕ್ಸ ಎಂಜಿನಿಯರನಿಗೆ ಕೇಳಿಕೊಂಡ. ಎಂಜಿನಿಯರ ಶ್ರೀ ಮಲಕಣ್ಣ ಪೊಲೀಸರಿಗೆ ಫೋನು ಮಾಡಿದ.

ಚಳುವಳಿಕಾರರು ವಾಹನ ಸಂಚಾರ ತಡೆಯಲೆತ್ನಿಸಿದರು. ನೀರು ಸರಬರಾಜು ಆಫೀಸಿನ ಮುಂದಿನ ಸಿಮೆಂಟಿನ ಪೈಪುಗಳನ್ನು ಉರುಳಿಸಿ ತಂದು ದಾರಿಗಡ್ಡಲಾಗಿಟ್ಟರು. ಕಡಿದ ಮರಗಳನ್ನೆತ್ತಿ ತಂದು ಒಡ್ಡಿದರು. ಕಲ್ಲು ಮಣ್ಣುಗಳ ರಾಶಿ ಬೆಳೆಯಿತು. ಕಲೆಕ್ಟರ ಎಚ್. ಎಫ್. ನಾಯಿಟ್ ಪೋಲೀಸ ಸುಪರಿಂಟೆಡೆಂಟ್ ಪ್ಲೇಫೇರ್ ಮೊದಲಾದವರು ತುಳಜಾಪುರ ಅಗಸಿಯ ಬಳಿಯ ರೂಪಭವಾನಿ ಮಂದಿರ ಬಳಿ ಬಂದರು. ವಾಹನಗಳು ದಾರಿಗಡ್ಡಲಾದ ಸಿಮೆಂಟ್ ಪೈಪುಗಳನ್ನು ಕಂಡು ನಿಂತುಬಿಟ್ಟವು.

ಕಲೆಕ್ಟರ, ಎಸ್. ಪಿ. ಯವರು ಕೆಳಗಿಳಿದು ನಡೆದು ಬಂದರು. ಜನರಲ್ಲಿಯ ಕೋಲಾಹಲ ಜಾಸ್ತಿಯಾಯಿತು. ಕಲ್ಲು ತೂರಾಟ, ಓಡಾಟ ನಡೆದುವು. ಜನರನ್ನು ಚದುರಿಸಲು ಲಾಠಿ

ಚಾರ್ಜ ಆರಂಭವಾಯಿತು. ಸಿಕ್ಕ ಒಂಬತ್ತು ಜನರನ್ನು ಬಂಧಿಸಿ ಪೊಲೀಸರು ವ್ಯಾನಿನಲ್ಲಿ ತುಂಬಿದರು. ಜನ ಜಂಗುಳಿಯ ರೋಷ ಮೇರೆ ಮೀರಿತು. ಭಯಂಕರ ಕೋಲಾಹಲ. ಕಲೆಕ್ಟರ ಜನರಿಗೆ ಶಾಂತರಾಗಲು ಕೇಳಿಕೊಂಡ "ಊಹೂಂ, ಬಂಧಿಸಿದವರನ್ನು ಮೊದಲು ಬಿಟ್ಟುಬಿಡಿ" ಜನರು ಅಬ್ಬರಿಸಿದರು. ಒಮ್ಮಿಂದೊಮ್ಮೆ ಕಲೆಕ್ಟರ್ ಗುಂಡುಹಾರಿಸಲು ಅಜ್ಞೆಕೊಟ್ಟ. ಗುಂಡಿನ ಸುರಿಮಳೆ ನಡೆಯಿತು. ಇದು ಜನರ ರೋಷವನ್ನು ಮತ್ತಷ್ಟು ಹೆಚ್ಚಿಸಿತೇ ವಿನಃ ಅವರನ್ನು ಹೆದರಿಸಲಿಲ್ಲ. ಕಲ್ಲು ತೂರಾಟ ವರ್ಧಿಸಿತು.

ಈ ವಿಷಯ ತಿಳಿದು ಸೊಲ್ಲಾಪುರದ ಜನರು ರೂಪಾಭವಾನಿ ಕಡೆಗೆ ಧಾವಿಸಿದರು. ಬೆಳಗಿನ ಬೇರೊಂದು ಮೆರವಣಿಗೆಯಲ್ಲಿ ಭಾಗವಹಿಸಿ ದಣಿದು ಬಂದಿದ್ದ ಮಲ್ಲಪ್ಪ ಮನೆಯಲ್ಲಿ ಕುಳಿತಿದ್ದಾಗಲೇ ಚಳುವಳಿಯ ವಾರ್ತೆ ಅವನಿಗೆ ತಲುಪಿತು. "ನೀವೀಗ ಆಲಸ್ಯ ತೋರಿದರೆ ಚಳುವಳಿಗಾರರು ಮನಬಂದಂತೆ ವರ್ತಿಸಿ ಪೊಲೀಸರ ಗುಂಡುಗಳಿಗೆ ಬಲಿಯಾಗಿ ಪ್ರಾಣಕಳೆದುಕೊಳ್ಳುತ್ತಾರೆ" ಎಂದು ವಾರ್ತೆ ತಂದವರು ಮಲ್ಲಪ್ಪನವರಿಗೆ ನಿವೇದಿಸಿದರು.

ಮಲ್ಲಪ್ಪ ಮತ್ತು ಅವರ ಮಿತ್ರರು ತುಳಜಾಪುರದ ಅಗಸಿಯ ಬಳಿ ಬಂದಾಗ ಚಳುವಳಿಗಾರರಲ್ಲಿ ಹೊಸ ಉತ್ಸಾಹ ಪುಟಿಯಿತು. ನೆಲ ಬಾನು ಬಿರಿಯುವಂತೆ ಘೋಷಣೆ ಕೂಗಿದರು. ಎಲ್ಲವನ್ನೂ ಕೆಲವರು ಮಲ್ಲಪ್ಪನವರಿಗೆ ನಿವೇದಿಸಿದರು. "ಬಂಧಿಸಲ್ಪಟ್ಟ ಒಂಭತ್ತು ಜನರು ಚಳುವಳಿಗೆ ಸಂಬಂಧಿಸಿದವರಲ್ಲ. ಪಾಪ ನಿರಪರಾಧಿಗಳು. ಅವರನ್ನು ಬಿಟ್ಟು ಬಿಡಲಿ... ಎನ್ನು



ವುದು ಚಳುವಳಿಗಾರರ ಬೇಡಿಕೆ. ಅಧಿಕಾರಿ ಅದಕ್ಕೆ ಒಪ್ಪುತ್ತಿಲ್ಲ. ಇಬ್ಬರೂ ಹಟ ಹಿಡಿದಿದ್ದರು.

"ಬಂಧಿಸಿದವರ ಹೆಸರನ್ನು ಬರೆದುಕೊಂಡು ಬೇಕಾದರೆ ಪೊಲೀಸರು ಈಗ ಅವರನ್ನು ಬಿಟ್ಟುಬಿಡಲಿ. ಆಗಬಹುದೆ?" ಮಲ್ಲಪ್ಪ ಜನರಿಗೆ ಕೇಳಿದರು. ಚಳುವಳಿಗಾರರೆಲ್ಲ ಸಮ್ಮತಿಸಿದರು. ಮಲ್ಲಪ್ಪ ಮತ್ತು ಜೀವರಾಜ ಮಕುಲಚಂದರಿಬ್ಬರೂ ಕಲೆಕ್ಟರ ಮುಂದೆ ಈ ವಿಷಯ ಮಂಡಿಸಲು ಹೊರಟರು.

ತರುಣ ಮಲ್ಲಪ್ಪ ಕೈಯಲ್ಲಿ ರಾಷ್ಟ್ರೀಯ ಧ್ವಜ ಹಿಡಿದುಕೊಂಡು ಓಡಿಬಂದವನು ಮಿಸ್ಟರ ನಾಯಿಟನ ಮುಂದೆಯೇ ತಡೆದು ನಿಂತ. "ಬಂಧಿಸಿದ ಜನರನ್ನು ಬಿಟ್ಟು ಬಿಡ್ರೀ ಕಲೆಕ್ಟರ್, ಅವರು ನಿರಪರಾಧಿಗಳು" ಎಂದು ನಿರ್ಭಯವಾಗಿ ಆ ಏರುಜವ್ವನದ ತರುಣ ಗಂಭೀರವಾಗಿ ಗರ್ಜಿಸಿದ. ಮಲ್ಲಪ್ಪನವರ ಬೇಡಿಕೆಗೆ ಕಲೆಕ್ಟರ ಒಪ್ಪಲಿಲ್ಲ. ಜನರ ಕಲ್ಲು ತೂರಾಟ ಹೆಚ್ಚಿತು. ಮಲ್ಲಪ್ಪ ಅವರನ್ನು ಶಾಂತಗೊಳಿಸಿ ಕಲೆಕ್ಟರನ ಮುಂದೆ ಕೈ ಜೋಡಿಸಿ ಮತ್ತೆ ಕೇಳಿಕೊಂಡರು.

ಮಲ್ಲಪ್ಪನವರು ಅಹಿಂಸಾವಾದಿಗಳಾದ್ದರು. ಶಾಂತಪ್ರಿಯರಾಗಿದ್ದರು. ಸಹನಾ ಮೂರ್ತಿಗಳಾಗಿದ್ದರು. ಅವರು ತಾಳ್ಮೆಯನ್ನು ಕಳೆದುಕೊಳ್ಳಲಿಲ್ಲ. ಮತ್ತೆ ಕಲೆಕ್ಟರನ ಮನವೊಲಿಸಲು ಯತ್ನಿಸಿದರು. ನಾಯಿಟ್ ಸಾಹೇಬ ಬಂಧಿಸಿವ ಜನರನ್ನು ಕೂಡಿಸಿದ ಪೊಲೀಸ್ ವ್ಯಾನನ್ನು ಮುಂದೆ ನಡೆಯಲು ಅಪ್ಪಣೆ ಮಾಡಿದ. ತತ್‌ಕ್ಷಣ ಜನ ಸುತ್ತಲೂ ಕಲ್ಲಿನ ಮಳೆಗರೆಯತೊಡಗಿತು. ನಾಯಿಟ್ ಬದುಕುವುದು ದುಸ್ತರವಾಯಿತು. ತಕ್ಷಣ ಮಲ್ಲಪ್ಪ ಧನಶೆಟ್ಟಿಯವರು ಬದಿಯ ಒಬ್ಬನಿಂದ ಲಾಠಿ

ತೆಗೆದುಕೊಂಡು ತಿರುಗಿಸುತ್ತ ಕಲ್ಲುಗಳು ಕಲೆಕ್ಟರನಿಗೆ ಬಡಿಯುದಂತೆ ಅವನನ್ನು ತಮ್ಮ ಮಗ್ಗುಲಿಗೆ ನಡೆಸಿಕೊಂಡು ಹೋಗಿ ಜೀಪಿನಲ್ಲಿ ಕುಳ್ಳಿರಿಸಿದರು. ಹೀಗೆ ಮಲ್ಲಪ್ಪನಿಲ್ಲದಿದ್ದರೆ ನಾಯಿಟಾ ಖಂಡಿತ ಜೀವಸಹಿತ ಉಳಿಯುತ್ತಿರಲಿಲ್ಲ. ಮತ್ತೆ ಮಲ್ಲಪ್ಪನವರು ತಮ್ಮ ಬೇಡಿಕೆಯನ್ನು ಮುಂದಿಟ್ಟರು. ಆದರೆ ನಾಯಿಟನೋ ಕಟುಕ. ಇವರ ಬೇಡಿಕೆಗೆ ಕಿವುಡನಾಗಿ ಗೋಳಿಬಾರ ಪ್ರಾರಂಭಿಸಲು ಮತ್ತೆ ಅಪ್ಪಣೆ ಕೊಟ್ಟ.

## ಪ್ರಥಮ ಬಲಿ

ಮರುಕ್ಷಣ ಗುಂಡುಗಳ ಸುರಿಮಳೆ ಪ್ರಾರಂಭವಾಯಿತು. ಕಲೆಕ್ಟರನ ಹೊಣೆಗೇಡಿತನದ ವರ್ತನೆಗೆ, ಎಸ್. ಪಿ. ಪ್ಲೇಫೆರನ ಮೌನಕ್ಕೆ ಸುತ್ತಲೂ ಹಾಹಾಕಾರ. ಗಾಯಗೊಂಡು ನೆಲಕ್ಕುರುಳಿದವರ ವೇದನಾಮಯವಾದ ನರಳುವಿಕೆ, ಗುಂಡು ತಗಲಿ ಅಮರರಾಗುವ ತರುಣರ 'ಜೈ ಭಾರತ ಮಾತಾಕೀ ಜೈ' ಎಂಬ ಕೊನೆಯ ಜಯಘೋಷಣೆ, ಬಂದೂಕಿನ ಸದ್ದುಗಳೊಂದಿಗೆ ರೂಪಾಭವಾನಿಯ ಸುತ್ತಮುತ್ತಲ ಸ್ಥಳವೆಲ್ಲ ರುದ್ರ ಭಯಂಕರವಾಯಿತು. ಇಪ್ಪತ್ತರ ತರುಣ ಕಾಂಗ್ರೆಸ್ ಕಾರ್ಯಕರ್ತ ಶಂಕರ ಶಿವದಾರೆಯ ಎದೆಗೆ ಗುಂಡು ತಾಗಿತು. ಭಾರತ ಮಾತಾಕೀಜೈ ಎನ್ನುತ್ತೆನ್ನುತ್ತಲೇ ಅವನು ನೆಲಕ್ಕುರುಳಿದ. ಪ್ರಯಾಸ ಪಟ್ಟು "ನೀರು, ನೀರು, ಪಾಣೀ——"ಎಂದ. ಅಲ್ಲಿಯೇ ನಿಂತಿದ್ದ ಶಿವಯೋಗಪ್ಪ ಶಿರಸಿ ಓಡಿ ಹೋಗಿ ಸಮೀಪದ ಸ್ಮಶಾನ ಕಾವಲುಗಾರನ ಗುಡಿಸಲಿಂದ ನೀರು ತಂದು ಆ ತರುಣನಿಗೆ ಕೊಟ್ಟ. ಪ್ರಾಣಪಕ್ಷಿ ಹಾರಿತು. ಅವನ ಕೈಯಲ್ಲಿಯ ಧ್ವಜವನ್ನು ಯಾರೋ ಎತ್ತಿಹಿಡಿದರು. ಸುತ್ತಲಿನವರು ಮುಗಿಲು ಬಿರಿಯುವಂತೆ ಗರ್ಜಿಸಿದರು. "ಶಂಕರ ಶಿವದಾರೆಕೀ ಜೈ." ಒಂದೇ ಒಂದು ತಿಂಗಳ ಹಿಂದೆ ಮದುವೆಯಾಗಿದ್ದ ಅವನ ಹೆಂಡತಿಯ ಕೈಯಲ್ಲಿರುವ ಹಸಿರು ಬಳೆಗಳನ್ನೂ ಮಾಸಿರಲಿಲ್ಲ. ಇಂದವಳು ಭಾರತಾಂಬೆಯ ಅಡಿಗಳ ಮೇಲೆ ತನ್ನ ಸೌಭಾಗ್ಯವನ್ನು ಚೆಲ್ಲಿಬಿಟ್ಟಳು. ಹೊಚ್ಚ ಹೊಸ ಹಸಿರು ಬಳೆಗಳು ಸಶಬ್ದವಾಗಿ ಒಡೆದು ಪುಡಿಪುಡಿಯಾದುವು.



ಚಳುವಳಿಗಾರರ ಜಯಘೋಷ ಗಗನ ಭೇದಿಸುತ್ತಿತ್ತು. ಮಲ್ಲಪ್ಪ ಧನಶೆಟ್ಟಿಯವರು ಆ ಗುಂಪಿನಿಂದ ದಾರಿಬಿಡಿಸಿಕೊಂಡು ಶಂಕರನ ಬಳಿ ಧಾವಿಸಿದರು. ಬಾಗಿ ಕುಳಿತು ಶಂಕರನ ತಲೆ ನೇವರಿಸಿ ಎರಡು ಹನಿ ಅಶ್ರುತರ್ಪಣ ಸಲ್ಲಿಸಿ ಎದ್ದು ನಿಂತರು. ಅವರ ವೀರರಕ್ತ ಕುದಿಯಿತು. ಶಾಂತಿ ಮಂತ್ರ ಹಾರಿಹೋಯಿತು. ಅಹಿಂಸಾತತ್ವ ಚಲ್ಲಾಪಿಲ್ಲಿಯಾಯಿತು. ಮೈಯಲ್ಲಿ ರುದ್ರಾವತಾರ ಸಂಚಾರವಾಯಿತು. ಜಯಘೋಷ ಮಾಡುತ್ತ ಪೊಲೀಸ ವ್ಯಾನುಗಳತ್ತ ಮುನ್ನುಗ್ಗಿದರು. ವ್ಯಾನುಗಳು ಮುಂದೆ ಚಲಿಸಿದವು. ಚಳುವಳಿಗಾರರು ಬೆನ್ನಟ್ಟಿದರು.

ರಣಭೂಮಿಯಲ್ಲಿ ಹೆಣಗಳು ಬಿದ್ದಿದ್ದುವು. ಹದಿನೇಳು ವರ್ಷದ ಸಮಗಾರ ತರುಣ ಸಖದೇವನೆದೆಗೆ ಗುಂಡು ತಾಕಿತ್ತು. ಅವನ ಉಸಿರು ನಿಲ್ಲಿಸಿತ್ತು. ಗಂಗಾರಾಮ ಸಾವಳಾರಾಮ ಮತ್ತೊಂದೆಡೆ ಪ್ರಾಣ ತೆತ್ತಿದ್ದ. ಚಳುವಳಿ ನೋಡಲು ಬಂದು ನಿಂತಿದ್ದ ಶಾಲೆಯ ವಿದ್ಯಾರ್ಥಿ ಹನ್ನೆರಡು ವರ್ಷದ ಶ್ರೀಧರ ಕುಲಕರ್ಣಿಗೆ ಎರಡು ಗುಂಡುಗಳು ತಾಕಿ ಜೀವ ಅಪಹರಿಸಿದವು. ತುಳಜಾರಾಮ ಎಂಬ ೨೩ ವರ್ಷದ ಯುವಕನ ತಲೆಗೆ

ಗುಂಡು ತಗಲಿ ಅಸುನೀಗಿದ್ದ. ಗೋವಿಂದನ ಕಾಲಿಗೆ ಗುಂಡು ತಗಲಿ ಕಾಲು ಸೀಳಿ ಹೋಗಿತ್ತು. ಮತ್ತೊಬ್ಬನ ತೋಳಿಗೆ ಇನ್ನೊಬ್ಬನ ಹೊಟ್ಟೆಗೆ ಗುಂಡುಗಳು ಲಗ್ಗೆ ಹಾಕಿದವು. ರೂಪ ಭವಾನಿ ಸುತ್ತಮುತ್ತಲಿನ ಪ್ರದೇಶ ಸ್ಮಶಾನವಾಗಿತ್ತು. ಹೆಣಗಳ ರಾಶಿ ಬಿದ್ದಿತ್ತು.

ಶಂಕರ ಶಿವದಾರೆಯ ಸಾವನ್ನು ಕಣ್ಣಾರೆ ಕಂಡ ಮಲ್ಲಪ್ಪ ಧನಶೆಟ್ಟಿಯವರ ಮನಸ್ಸು ಇನ್ನೂ ಸ್ಥಿಮಿತಕ್ಕೆ ಬಂದಿರಲಿಲ್ಲ. ಮುಂದೇನು? ಎನ್ನುವ ವಿಚಾರ ಇನ್ನೂ ನಿರ್ಧಾರವಾಗಿರಲಿಲ್ಲ. ಅಷ್ಟರಲ್ಲಿ ಓಡಿಬಂದ ಒಬ್ಬನು ಸುದ್ದಿ ಅರುಹಿದನು: "ಮಲ್ಲಪ್ಪ ಕಾಕಾ........ ಮಂಗಳವಾರ ಚೌಕಿಯ ಇಬ್ಬರು ಪೋಲೀಸರನ್ನು ಚಳುವಳಿಗಾರರು ಜೀವಂತವಾಗಿ ಸುಟ್ಟುಬಿಟ್ಟರು. ಜಗಳಚಾಲೂ ಅದ......"

ಇದನ್ನು ಕೇಳಿದ ಮಲ್ಲಪ್ಪ ಹಣೆ ಬಡಿದುಕೊಂಡು "ಅಬ್ಬ! ಜನಕ್ಷೋಭೆಯ ರುದ್ರಾವತಾರವೆ...." ಎಂದು ಉದ್ಗರಿಸಿದರು. ಮೊದಲೆಯೇ ಉದ್ರಿಕ್ತಗೊಂಡ ಗುಂಪು ನಿರಪರಾಧಿಗಳಾದ ನೂರಾರು ಜನರ ಸಾವಿಗೆ ಕೆರಳಿ ಕೆಂಡವಾದರು. ಮಲ್ಲಪ್ಪನವರ ಮಾತಿಗೂ ಕಿವಿಗೊಡಲಿಲ್ಲ. "ಸಾವಿಗೆ ಸಾವು" "ಹುತಾತ್ಮರ ಅನ್ಯಾಯದ ವಧೆಗೆ ಸೇಡು ತೀರಿಸಿಕೊಳ್ಳಲೇಬೇಕು." ಎಂದು ಮೊದಲಾಗಿ ಕೂಗುತ್ತ ರಕ್ತ ಚೆಲ್ಲಿದ ಬಟ್ಟೆಗಳಿಂದ ಭಯಂಕರವಾಗಿ ಓಡತೊಡಗಿದರು.

ಸಮುದ್ರದ ಅಲೆಗಳಂತೆ ಜನರು ಸಿಕ್ಕ ಸಿಕ್ಕ ಆಯುಧಗಳನ್ನು ಕೈಯಲ್ಲಿ ಹಿಡಿದುಕೊಂಡು ನುಗ್ಗಿ ಬಂದುದು ಮೊಟ್ಟ



ಮೊದಲು ಮಂಗಳವಾರ ಪೇಟೆಯ ಪೋಲೀಸ ಠಾಣೆಗೆ. ಠಾಣೆಯ ಬಳಿಯ ಟೆಲಿಫೋನಿನ ತಂತಿ ಕಡಿದರು. ಇವರ ಗದ್ದಲ ನೋಡಿದ ಪೋಲೀಸರು ಓಡಿಹೋಗಿ ಠಾಣೆಯ ಬಾಗಿಲ ಮುಚ್ಚಿಕೊಂಡರು. ಚಳುವಳಿಗಾರರಲ್ಲಿ ಮರಿಸ್ವಾಮಿ ಎಂಬೊಬ್ಬ ತರುಣ. ಆ ಸ್ವಾಮಿ ಮನೆಹೊಕ್ಕರೆ ಲಕ್ಷ್ಮಿ ಆ ಮನೆಯಲ್ಲಿ ನೆಲೆಸುತ್ತಾಳೆ. ಅವನ ಕಾಲ ಗುಣ ಬಹಳ ಶುಭ ಎಂದು ಜನ ನಂಬಿದ್ದರು. ಲಿಂಗಾಯತ ಶ್ರೀಮಂತರೆಲ್ಲ ಹಬ್ಬ ಹರಿದಿನಗಳಲ್ಲಿ ಮರಿಸ್ವಾಮಿಯನ್ನು ಮನೆ ಮನೆಗೆ ಕರೆಸಿ, ಪಾದಪೂಜೆ ಮಾಡಿ, ಅವನಿಗೆ ಬಹಳಷ್ಟು ಹಣವನ್ನು ಜರತಾರಿಯ, ರೇಷ್ಮೆಯ ವಸ್ತ್ರಗಳನ್ನು ದಕ್ಷಿಣೆಯ ರೂಪದಲ್ಲಿ ಕೊಡುತ್ತಿದ್ದರು. ಅವನು ಅದನ್ನೆಲ್ಲ ತಂದು ಬಡಬಗ್ಗರಿಗೆ ಹಂಚುತ್ತಿದ್ದನು. ಹೀಗಾಗಿ ಮರಿಸ್ವಾಮಿಯ ಮಾತೆಂದರೆ ಜನರಿಗೆ ವೇದವಾಕ್ಯ –ದೇವವಾಕ್ಯ.

ಇಲ್ಲಿ ಮರಿಸ್ವಾಮಿ ನಿಂತು ಕೂಗುತ್ತಿದ್ದ "ಠಾಣೆಯ ಬಾಗಿಲು ಮುರಿಯಿರಿ.... ಹೂಂ ಒಡೆಯಿರಿ, ಒಳಗಿನ ಪೋಲೀಸರನ್ನು ಹೊರಗೆಳೆದುಕೊಂಡು ಬರ್ರಿ...." ಜನರು ಅವನ ಮಾತಿಗೆ ಆವೇಶಗೊಂಡು ಬಾಗಿಲು ಮುರಿದರು. ಒಳಗೆ ಹೆದರುತ್ತ ಕುಳಿತಿದ್ದ ಪೋಲೀಸ ಪೇದೆಗಳನ್ನು ಹೊರಗೆಳೆದು ತಂದರು.

ಚಾಂದ ಅಲ್ಲಾವುದ್ದೀನ ಇಪ್ಪತ್ತು ವರ್ಷದ ಪೋಲೀಸಪೇದೆ ಅವನನ್ನೆಳೆದು ತಂದವರು ಮೈ ಮುಖ, ತಲೆ, ಬೆನ್ನು ಎನ್ನದೆ ಸಿಕ್ಕ ಕಡೆಯಲ್ಲೆಲ್ಲ ಲಾಠಿ, ಕೈ, ಕಲ್ಲುಗಳಿಂದ ಹೊಡೆದರು. ಕ್ಷಣದಲ್ಲೇ ಅವನ ಮೈ ರಕ್ತಸಿಕ್ತವಾಗಿ ಎಚ್ಚರ ತಪ್ಪಿದನು. ಯಾರೋ

ಅವನನ್ನು ಆಸ್ಪತ್ರೆಗೆ ಒಯ್ಯುವಾಗ ದಾರಿಯಲ್ಲಿಯೇ ಪ್ರಾಣ ಬಿಟ್ಟನು.

ನರಹರಿ ಪೇದೆಗೂ ಅದೇ ಗತಿಯಾಯಿತು. ಅವನ ಮೈಯ ಒಂದಿಂಚು ಭಾಗವೂ ಪೆಟ್ಟುಗಳಿಂದ ತಪ್ಪಿಸಿಕೊಳ್ಳಲಿಲ್ಲ. "ನನ್ನ ಕಡಿ ಏನು ತಪ್ಪದಾ.... ನಾ ಗರೀಬ ಇದ್ದೀನಿ.... ಲಾಚಾರ ಇದ್ದೀನಿ. ಹೊಟ್ಟೆ ಸಲ್ಯಾಕ ಈ ನೌಕರಿ ಮಾಡ್ತೀನಿ.... ನನಗೆ ಜೀವದಾನಾ ಮಾಡ್ರೆಪ್ಪೋ" ಎನ್ನುತ್ತ ಅಳುವ ಅವನ ಕೂಗನ್ನು ಆ ಗುಂಪಿನಲ್ಲಾರು ಲೆಕ್ಕಿಸಬೇಕು? ಮರುಕ್ಷಣ ಅವನೂ ಎಚ್ಚರ ತಪ್ಪಿದ.

ದಾದಾ ಜಾಫರನನ್ನು ನಿಲ್ಲಿಸಿ ಸುತ್ತಲೂ ಕಾಗದ, ಕುರ್ಚಿ, ಬಟ್ಟೆ, ಫೈಲುಗಳನ್ನು ಒಟ್ಟಿದರು. ಹತ್ತಿರದ ಭುಸಾರ ಗಲ್ಲಿಯಲ್ಲಿಯ ರಾಜುಕಿ ಅವರ ಅಂಗಡಿಯಿಂದ ಸೀಮೆಎಣ್ಣೆ ತಂದು, ದಾದಾ ಜಾಫರನ ಮೇಲೆ ಸುರುವಿ ಕಡ್ಡಿಗೀರಿ ಬೆಂಕಿಯಿಟ್ಟರು. ಕ್ಷಣಗಳಲ್ಲಿ ಬೆಂಕಿ ಧಗಧಗಿಸಿತು. ಜಾಫರ ನೀರಿನಿಂದ ಹೊರತೆಗೆದ ಮೀನಿನಂತೆ ಬೆಂಕಿಯಲ್ಲಿ ಒದ್ದಾಡತೊಡಗಿದ; ಒದರಾಡತೊಡಗಿದ. ನಿಮಿಷಗಳ ನಂತರ ಅವನ ಅರಚುವಿಕೆ ನಿಂತಿತು.

"ಮಹಾತ್ಮಾ ಗಾಂಧೀ ಕೀ ಜೈ" ಎನ್ನುತ್ತ ಚಳುವಳಿಗಾರರು ಕೋರ್ಟ ಕಡೆಗೆ ಹೊರಟರು. ಕೆಲವರ ಕೈಗಳಲ್ಲಿ ಸೀಮೆಎಣ್ಣೆಯ ಡಬ್ಬಗಳು. ಕಲೆಕ್ಟರ್ ಆಫೀಸು, ಡಿಸ್ಟ್ರಿಕ್ಟ ಕೋರ್ಟ ಹಾ ಹಾ ಎನ್ನುವುದರೊಳಗಾಗಿ ಬೆಂಕಿಗಾಹುತಿಯಾದವು. ಕಲೆಕ್ಟರ್, ಜಡ್ಜರ ಬಂಗಲೆಗಳು ಬೆಂಕಿ ಜ್ವಾಲೆಯಲ್ಲಿ ಬೇಯತೊಡಗಿದುವು. ಯುರೋಪಿಯನ್ನರು ಹೆಂಡಿರು ಮಕ್ಕಳನ್ನು



ರೈಲ್ವೆಯಲ್ಲಿ ಕೂಡಿಸಿ, ಇದ್ದಬಿದ್ದ ಪೋಲೀಸ ಪಡೆಯೊಂದಿಗೆ ಪುಣೆಗೆ ವಿಶೇಷ ಗಾಡಿ ಬಿಡಿಸಿದರು.

ಮಲ್ಲಪ್ಪ ಮತ್ತು ಅವರ ಸಂಗಡಿಗರು ಇದೆಲ್ಲಕ್ಕೂ ಕೇಂದ್ರ ಕಾರಣನಾದ ಕಲೆಕ್ಟರನನ್ನು ಆಹುತಿ ತೆಗೆದುಕೊಳ್ಳಲು ರೈಲ್ವೆಯ ಸುತ್ತಲೂ ಹೊಂಚು ಹಾಕಿಕೊಂಡು ಕುಳಿತಿದ್ದರು. ಆ ಕಡೆ ಊರಲ್ಲಿ ಪೋಲೀಸರನ್ನು ಜೀವಂತ ದಹನಮಾಡಿದ ಸುದ್ದಿ ಮಲ್ಲಪ್ಪ ಧನಶೆಟ್ಟಿಯವರಿಗೆ ತಿಳಿಯಿತು. "ತಮಗೆ ಮೊದಲೇ ಗೊತ್ತಾಗಿದ್ದರೆ ಇದನ್ನು ತಪ್ಪಿಸಬಹುದಿತ್ತಲ್ಲಾ" ಎಂದು ಆ ಬಡಪಾಯಿಗಳ ಮರಣಕ್ಕೆ ಮಲ್ಲಪ್ಪನವರು ಮರುಗಿದರು.

ಊರಲ್ಲಿ ಸರ್ಕಾರಿ ಕಛೇರಿಗಳ ಕಾಗದ ಪತ್ರಗಳು, ಫೈಲುಗಳ ರಾಶಿಗಳು, ಕಟ್ಟಿಗೆಯ ಅಲಮಾರಗಳು, ಕುರ್ಚಿ, ಟೇಬಲ್ಲು-ಎಲ್ಲವೂ ಬೆಂಕಿಗಾಹುತಿಯಾದವು. ವಕೀಲರು ತಮ್ಮ ಕಪ್ಪು ಕೋಟು ಟೈಗಳಿಗೆ ಬೆಂಕಿಯಿಟ್ಟು ತಾವು ಕೋರ್ಟಿನ ಕೆಲಸ ಬಿಟ್ಟೆವೆಂದು ಸಾಬೀತುಪಡಿಸಿದರು. ಸರ್ಕಾರಿ ನೌಕರರೆಲ್ಲ ರಾಜೀನಾಮೆ ಬರೆದುಕೊಟ್ಟರು. ಸಂಜೆಯೊಳಗಾಗಿ ಸೊಲ್ಲಾಪುರದ ಸರ್ವ ಆಡಳಿತ ಸಾರ್ವಜನಿಕರ ಕೈಪಾಲಾಯಿತು.

ಕ್ರಾಂತಿವೀರರ ಕ್ರೋಧಾವೇಶ ಏರುತ್ತಲೇ ಇತ್ತು. ಹೊರಗಿನ ಸೈನ್ಯ ಬರದಂತೆ ಊರಿನ ನಾಲ್ಕು ನಿಟ್ಟಿನ ದೊಡ್ಡ ಸೇತುವೆ ಕೆಡವಿದರು. ತಂತಿ ಕಂಬ ನೆಲಸಮವಾದುವು. ಸಿದ್ಧರಾಮನ ಗುಡಿಯ ವಿಶಾಲ ಅಂಗಳದಲ್ಲಿ ಸಾವಿರಾರು ತರುಣರು ಸೇರಿದರು.

ಕೋರ್ಟಿನ ಕಟ್ಟಡ ಬೆಂಕಿಜ್ವಾಲೆಯಲ್ಲಿ ಉರಿಯುವುದನ್ನು ಅಸಹಾಯಕತೆಯಿಂದ ನೋಡುತ್ತ ನಗರಾಧ್ಯಕ್ಷ ಸೇಠ

ಮಾಣಿಕಚಂದರು ಮುಂದೋಡಿದರು. ಜನರು ಅವರನ್ನು ತಡೆದರು. ಅದನ್ನು ಆರಿಸಲು ಬಂದ ನೀರಿನ ವ್ಯಾನುಗಳು ಬಂದ ದಾರಿಯಲ್ಲೇ ಹಿಂತಿರುಗಿದುವು.

ಮಲ್ಲಪ್ಪ ಧನಶೆಟ್ಟಿಯವರು ಊರ ಓಣಿ ಓಣಿಗಳಲ್ಲಿ ತಿರುಗಾಡುತ್ತ ಹೆದರಿದ ಜನರಿಗೆ ಧೈರ್ಯ ನೀಡುತ್ತಿದ್ದರು. “ಹೆದರಬ್ಯಾಡ್ರಿ.... ತರುಣರೇ.... ಸ್ವಾತಂತ್ರ್ಯ ಬಲಿದಾನಕ್ಕೆ ತಯಾರಾಗಿ ಮುಂದೆ ಬರ್ರಿ ... ಸ್ವಾತಂತ್ರ್ಯ ಶೂರರಿಗೆ ಸಿಗುತ್ತದೆ. ಹೇಡಿಗಳಿಗಲ್ಲ. ಹೆಂಗಸರು ಮಕ್ಕಳು ಹಿರಿಯರು ಯಾರೂ ಅಂಜುವ ಕಾರಣವಿಲ್ಲ.” ಎನ್ನುತ್ತ ಗಸ್ತು ತಿರುಗಿದರು.

ಮೂರು ದಿನಗಳವರೆಗೂ ಸೊಲ್ಲಾಪುರದಲ್ಲಿ ಒಂದು ಪೊಲೀಸ ಪ್ರಾಣಿಯೂ ಸುಳಿಯಲಿಲ್ಲ. ಸೊಲ್ಲಾಪುರ ಸಂಪೂರ್ಣವಾಗಿ ರಾಷ್ಟ್ರೀಯ ಕಾಂಗ್ರೆಸ್ಸಿಗರ ಕೈಯಲ್ಲಿತ್ತು.

## ಬ್ರಿಟಿಷರ ದಬ್ಬಾಳಿಕೆ

ಪುಣೆ, ಹೈದ್ರಾಬಾದ ಕಡೆಯಿಂದ ಸೈನಿಕರನ್ನು ತುಂಬಿಕೊಂಡು ವ್ಯಾನುಗಳು ಸೊಲ್ಲಾಪುರ ಪ್ರವೇಶಿಸಿದುವು. ಕೆಂಪು ಮುಖದ ಟಾಮಿಗಳನ್ನು ಹೊತ್ತು ರೈಲುಗಳು ಬಂದವು. ಲೆಫ್ಟಿನೆಂಟ್ ಕರ್ನಲ್ ಎಲ್. ಪಿ. ಪೇಜ 'ಮಾರ್ಶಲ್ ಲಾ' ದ ಕಮಾಂಡಿಂಗ್ ಆಫೀಸರನಾಗಿ ಸೊಲ್ಲಾಪುರವನ್ನು ತನ್ನ ಕೈಯಲ್ಲಿ ತೆಗೆದುಕೊಂಡ.

ಒಂದೇ ದಿನ ಹದಿನೈದು ಸಾವಿರ ಜನರನ್ನು ಬಂಧಿಸಿದ. ಕಂಡಲ್ಲಿ ಗುಂಡಿಕ್ಕಿ ಹಲವರನ್ನು ಕೊಂದ. ಅವನ ರಕ್ಕಸ ನಡತೆಗೆ



ಸೊಲ್ಲಾಪುರ ನಡುಗಿತು. ಮಲ್ಲಪ್ಪನವರ ಗುಂಪಿನ ಕೆಲ ಯುವಕರು ಸೆರೆಸಿಕ್ಕರು. ಪೇಜ ಹಲ್ಲು ಮಸೆಯುತ್ತ ಸೊಲ್ಲಾಪುರದ ಹುಲಿಯಾದ ಮಲ್ಲಪ್ಪ ಧನಶೆಟ್ಟಿಯವರನ್ನು ಹುಡುಕತೊಡಗಿದ. ಹುಡುಕಿದರೆ ಸಿಗುವ ಹುಲಿಯೇ ಮಲ್ಲಪ್ಪನವರು ? ಪೋಲೀಸ ಅಧಿಕಾರಿಗಳಿಗೆ ಅವರು ಸವಾಲಾದರು. ಮಲ್ಲಪ್ಪನನ್ನು ಹುಡುಕಿ ತರುವೆ ಅಥವಾ ಅವನ ಶವವಾದರೂ ಎಳೆದು ತರುವೆನೆಂದು ಸಾರ್ಜಂಟ್ ಎ. ಡಿ. ಹಾಲ್ಫ್ ಪಣತೊಟ್ಟ. ಊರಲ್ಲಿಯ ಪ್ರತಿ ಮನೆಯನ್ನೂ ಶೋಧಿಸುವಂತೆ ಸೈನಿಕರಿಗೆ ಆಜ್ಞೆ ಹೊರಟಿತು.

ಸಾರ್ಜಂಟ್ ಹಾಲ್ಫ್ ಅಂದು ರಾತ್ರಿ ಊರಲ್ಲಿ ಮಲ್ಲಪ್ಪನನ್ನು ಅರಸುತ್ತಿದ್ದ. ಈ ಕಡೆ ಅವನು ವಾಸಮಾಡಿದ ಮನೆ ಬೆಂಕಿಗಾಹುತಿಯಾಗಿ ಧಗಧಗಿಸುತ್ತಿತ್ತು. ಮಲ್ಲಪ್ಪನನ್ನರಸುತ್ತಿರುವ ಪೋಲೀಸ ಅಧಿಕಾರಿಗೆ ಗುಂಡು ತಗುಲಿತು. ಹಲವಾರು ಜನ ಪೋಲೀಸರನ್ನು ಜನರು ಅಪಹರಿಸಿದರು. ಈ ಎಲ್ಲ ಘಟನೆಗಳ ಬಗ್ಗೆ ಸೊಲ್ಲಾಪುರದ ಕಾಂಗ್ರೆಸ್ಸಿನ ಯಾವ ಮುಖಂಡನೂ ತುಟಿ ಎರಡು ಮಾಡಲಿಲ್ಲ. ಅಷ್ಟು ಗುಪ್ತ, ಅಷ್ಟು ರಹಸ್ಯ. ಅಹಿಂಸೆಯ ಹೆಸರಿನ ಮೇಲೆ ನಡೆದ ಈ ಹಿಂಸಾತ್ಮಕ ಸತ್ಯಾಗ್ರಹದ ಸಂಘಟನೆ ಬೇರೆಲ್ಲೂ ನಡೆಯಲಿಲ್ಲ. ಈ ಘಟನೆಯಲ್ಲಿ ನಿರಪರಾಧಿಗಳು ನೀರು ನೀರು ಎಂದು ಹಲುಬಿ ಸತ್ತರು. ಸತ್ತವರ ಸಂಖ್ಯೆ ಅಗಣಿತ. ಪಟ್ಟಿ ಮಾಡಿದರೆ ಕಾಗದ ಸಾಲಲಿಕ್ಕಿಲ್ಲ. ರಾಮುಭಾವು ರಾಜವಾಡೆಯವರ 'ಕರ್ಮಯೋಗಿ' ಪತ್ರಿಕೆ ಅಂದು ವಿಶೇಷ ಪುಟ ಪ್ರಕಟಿಸಿ ಸತ್ತವರ ಹೆಸರು ಸೂಚಿಸಿತು. ಶನಿವಾರ ದಿನಾಂಕ ೧೦–೫–೧೯೩೦ ರ 'ಕರ್ಮಯೋಗಿ'ಯ ವಿಶೇಷಪುಟದಲ್ಲಿ ಮೂಡಿಬಂದಹೆಸರುಗಳಿವು.

ಹಾಜುಮಾಯಿ ಚೌಕದ ಎಲೆಯಂಗಡಿಯ ಶಂಕರ ಪಂಢರಿನಾಥ, ಕುಂಬಾರ ವೇಸ ಹತ್ತಿರ ಹಿಂದೂ ಮುಸಲ್ಮಾನರಿಬ್ಬರು ಶುಕ್ರವಾರ ಪೇಟೆಯ ಶೇಠ ಹೀರಾಚಂದರಮುಗ ರತಿಲಾಲ, ಘೋಂಬ್ರೆ, ಶಾಮರಾವ ವಳಸಂಗಕರ, ಶ್ರೀಮತಿ ಈರಾಬಾಯಿ, ಬಯಲು ಕಡೆಗೆ ಹೊರಟಿದ್ದ ನಿರಪರಾಧಿ ರಂಗೇರ ಸ್ತ್ರೀ ಚಾಟ ಗಲ್ಲಿಯಲ್ಲಿ ಕುಳಿತಿದ್ದ ವೃದ್ಧ, ಸಿದ್ಧೇಶ್ವರ ಪೇಟೆಯಲ್ಲಿ ನಿಂತ ಸಂಗಪ್ಪ, ಮಲ್ಲಿಕಾರ್ಜುನಸ್ವಾಮಿ, ಮೆಕ್ಯಾನಿಕ್ ಥಿಯೇಟರಿನ ಇಬ್ಬರು ಕೆಲಸಗಾರರು, ಹತ್ತಿರದ ಹೋಟೆಲಿನ ಬಾಬುರಾವ ಕ್ಷೀರೆ, ಪರಶುರಾಮ ಕೆಮಕರ, ವಾಸುದೇವ ಶಾಸ್ತ್ರಿ, ಸೇವಕ ರಾಮು...

ಒಂದೇ ಎರಡೇ... ನೂರಾರು ನಿರಪರಾಧಿಗಳು. ಇವರು ಚಳುವಳಿಗಾರರಲ್ಲ. ಯಾವ ಸತ್ಯಾಗ್ರಹದಲ್ಲಿಯೂ ಭಾಗವಹಿಸಿರಲಿಲ್ಲ. ಸ್ವಾತಂತ್ರ್ಯ ಹೋರಾಟಗಾರರಲ್ಲ. ದಿನನಿತ್ಯದ ತಮ್ಮ ಕೆಲಸಗಳಲ್ಲಿ ತೊಡಗಿದ ಸೊಲ್ಲಾಪುರದ ನಿರಪರಾಧಿ ಜನರು ಏನೂ ಅರಿಯದ ಮುಗ್ಧ ಹೆಣ್ಣು-ಗಂಡುಗಳು.

ಈಗ ಬ್ಯಾರಿಸ್ಟರ ಜಿನ್ನಾ ಅವರು ಸೊಲ್ಲಾಪುರದ ಈ ಘಟನೆಗೆ ಜಾತೀಯ ಬಣ್ಣ ಬಳಿಯಲು ಪ್ರಯತ್ನಿಸಿದರು. ಮಲ್ಲಪ್ಪ ಧನಶೆಟ್ಟಿಯವರಿಂದಲೇ ಬದುಕಿದ ನಾಯಿಟ್ ಈಗ ಇದೆಲ್ಲವೂ ಮಲ್ಲಪ್ಪನವರದೇ ಕಾರಸ್ಥಾನವೆಂದು ಸರ್ಕಾರಕ್ಕೆ ವರದಿ ಸಲ್ಲಿಸಿದ. ಅಂದಿನ ಆ್ಯಕ್ಟಿಂಗ್ ಗವರ್ನರ್ ಹಾಟ್ಸನ್ ಸೊಲ್ಲಾಪುರಕ್ಕೆ ಭೇಟಿಯಿತ್ತ. ಅಂದಿನ ಪರಿಸ್ಥಿತಿಯನ್ನು ಕೂಲಂಕಷವಾಗಿ ಪರಿಶೀಲಿಸಿದ. ವಿವರವಾದ ವರದಿ ನೀಡಿ ವಿಶೇಷ ಸೈನ್ಯ ಪಡೆಯನ್ನು ಕಳಿಸಿ



ಕೊಡಲು ಕೇಳಿಕೊಂಡ. ವರದಿ ಓದಿ ವಾಯಿಸ್‌ರಾಯ್ ಲಾರ್ಡ ಐರ್ವಿನರು ತಕ್ಷಣ ಲೆಫ್ಟಿನೆಂಟ್ ಕರ್ನಲ್ ಎಂ.ಸಿ. ಕರಿಯ ಹಿರಿತನದಲ್ಲಿ ರಾಯಲ್ ಆಲಸ್ಟರ್ ರೈಫಲ್ ಪಡೆಯನ್ನು ಸೊಲ್ಲಾಪುರಕ್ಕೆ ಕಳಿಸಿಕೊಟ್ಟರು.'

ರಾಯಲ್ ಆಲಸ್ಟರ್ ರೈಫಲ್ ಪಡೆ ಸೊಲ್ಲಾಪುರಕ್ಕೆ ಬಂದಿತು. ಜನರು ಭೀತಿಯಿಂದ ತಲ್ಲಣಿಸಿದರು, ರೈಫಲ್ ಹಿಡಿದ ರಾಕ್ಷಸರಂತಹ ಸೈನಿಕರು ಊರ ಓಣಿ ಓಣಿಗಳಲ್ಲಿ ನಡೆದು ಬರುವಾಗ ಜನರು ಹೆದರಿ ಮನೆ ಬಾಗಿಲುಗಳನ್ನು ಮುಚ್ಚಿಕೊಂಡರು. ಮಕ್ಕಳು ಅವರ ಬೂಟುಗಾಲಿನ ಸದ್ದಿಗೆ ಚಿಟ್ಟನೆ ಚೀರಿ ಓಡಿ ಬಂದು ತಾಯಿಯನ್ನಪ್ಪಿಕೊಂಡರು.

ಮಲ್ಲಪ್ಪ ಜಗದೇಕಮಲ್ಲ. ಬಹದ್ದೂರ ಗಂಡು. ನೂರಾರು ಜನ ಜಟ್ಟಿಗಳನ್ನು, ಬಂಟರನ್ನು ಜೀವಕ್ಕೆ ಜೀವಕೊಡುವ ಸ್ನೇಹಿತರನ್ನು ಕಟ್ಟಿಕೊಂಡ ಗಂಡುಗಲಿ ಭಾರತದ ಕ್ರಾಂತಿಕಾರಿಗಳಲ್ಲಿಯೇ ಸಾಹಸಸಿಂಹ ಭಗತಸಿಂಗ ಮಾದರಿಯ ಅವರು. ಸೊಲ್ಲಾಪುರ ಬಿಟ್ಟು ಭೂಗತರಾಗಲು ಅವರ ಸ್ನೇಹಿತರು ಮಲ್ಲಪ್ಪನವರನ್ನು ಬಿನ್ನವಿಸಿಕೊಂಡರು. ಭಾವುಸಾಹೇಬ ಖಡಕೀಕರ, ಸೇಠ ಮಾಣಿಕಚಂದ, ರಾಮಭಾವು ರಾಜವಾಡೆಯರು ಮಲ್ಲಪ್ಪನವರಿಗೆ ವಿನಯವಾಗಿ ಬಿನ್ನವಿಸಿಕೊಂಡರು. "ಇನ್ನು ಮುಂದೆ ನೀವು ಊರಲ್ಲಿರಬಾರದು. ತತ್‌ಕ್ಷಣ ಊರು ಬಿಟ್ಟು ಭೂಗತರಾಗಿರಿ. ಸುರಕ್ಷಿತ ಸ್ಥಳಕ್ಕೆ ನಿಮ್ಮನ್ನು ತಲುಪಿಸುವ ಜವಾಬ್ದಾರಿ ನಮ್ಮದು"....ಎಂದರು.

"ಈ ನನ್ನ ಜನರನ್ನು ಬಿಟ್ಟು, ಅವರನ್ನೆಲ್ಲ ಮಿಲಿಟರಿಗೆ

ಬಲಿಕೊಟ್ಟು ನಾನು ಮಾತ್ರ ಊರು ಬಿಟ್ಟು ಹೋಗಲೆ ? ಖಂಡಿತ ನನ್ನಿಂದ ಇದು ಸಾಧ್ಯವಿಲ್ಲ." ಛಲಗಾರ ಮಲ್ಲಪ್ಪ ದಿಟ್ಟತನದಿಂದ ಉತ್ತರಿಸಿದರು. ಇನ್ನೂ ಮುವ್ವತ್ತರ ಹರೆಯದ ಮಲ್ಲಪ್ಪ ಸಾಹಸ ಜೀವಿ. ಮರಣ ಭಯ ತೊರೆದ ಮಹಾವೀರ. "ಸತ್ತರೆ ವೀರ ಸ್ವರ್ಗ. ಬದುಕಿದರೆ ಭಾರತದ ಸ್ವಾತಂತ್ರ್ಯ" ಎನ್ನುವ ಛಲ ಅವರದು. ಯಾವ ಹಿತೈಷಿಗಳ ಕಳಕಳಿಯ ಮಾತೂ ಅವರನ್ನು ಅವರ ದಾರಿಯಿಂದ ಹಿಮ್ಮೆಟ್ಟಿಸಲಿಲ್ಲ. ಅವರು ತಮ್ಮ ತಾಯ್ನಾಡು ಸೊಲ್ಲಾಪುರವನ್ನು ಕುಲದೇವರು ಸಿದ್ಧರಾಮನನ್ನು ಬಿಟ್ಟು ಹೋಗಲಿಲ್ಲ.

ಚಳುವಳಿಗಾರರ ಚಟುವಟಿಕೆಗಳು ದಿನಕ್ಕೊಂದು ರೀತಿ ಜರುಗುತ್ತಿದ್ದವು. ಹಗಲೊಂದು ಬಣ್ಣ ತಳೆದರೆ ಇರುಳು ಮತ್ತೊಂದೇ ರೂಪತಳೆದು ಸರ್ಕಾರದ ಕಣ್ಣಿನಲ್ಲಿ ಮಣ್ಣೆರಚು ತ್ತಿದ್ದುವು. ಸೈನಿಕರ ಅನ್ಯಾಯ ಅತ್ಯಾಚಾರಗಳು ಹೆಚ್ಚಿದವು. ಚಳುವಳಿಗಾರರ ಛಲವೂ ಇಮ್ಮಡಿಸಿತು–ನೂರ್ಮಡಿಸಿತು.

ಮಲ್ಲಪ್ಪ ಧನಶೆಟ್ಟಿಯವರು ಊರುಬಿಟ್ಟಿಲ್ಲವೆಂಬ ಸುಳಿವು ಸರ್ಕಾರಕ್ಕೆ ಸಿಕ್ಕಿತು. ಬ್ರಿಟಿಷ ಸರ್ಕಾರ ಸಹಸ್ರ ಕಣ್ಣುಗಳಿಂದ ಒಬ್ಬ ಮಲ್ಲಪ್ಪನವರನ್ನು ಹಿಡಿಯಲು ಹವಣಿಸುತ್ತಿತ್ತು. ಸೊಲ್ಲಾಪುರದ ಒಂದು ಹಸುಳೆಯೂ ಮಲ್ಲಪ್ಪನ ಸುಳಿವನ್ನು ಸರ್ಕಾರಕ್ಕೆ ಅರುಹಲಿಲ್ಲ. ಒಬ್ಬರ ನಾಲಿಗೆಯಿಂದಲೂ ಮಲ್ಲಪ್ಪನವರ ಇರುವು ಹೊರಬೀಳಲಿಲ್ಲ. ಸರ್ಕಾರದ ಸೈನಿಕರು ಚಿಂತಾಕ್ರಾಂತರಾಗಿ ತಲೆಯ ಮೇಲೆ ಕೈ ಹೊತ್ತು ಕುಳಿತರು. ನಾಯಿಟ್ ಸಾಹೇಬ ಚಡಪಡಿಸಿದ.



ಆದರೆ ಎಷ್ಟು ದಿನ ಈ ಕಣ್ಣು ಮುಚ್ಚಾಲೆ ಆಟ ನಡೆದೀತು ? ಪುರುಷಸಿಂಹ ಎಷ್ಟು ದಿನ ಗುಹೆಯಲ್ಲಿ ಅಡಗಿಕೊಂಡಿರಲು ಸಾಧ್ಯ ?

## ಮಲ್ಲಪ್ಪನವರ ಬಂಧನ

ಮೇ ೧೪ರ ಬೆಳಗಾಯಿತು. ಸೊಲ್ಲಾಪುರಕ್ಕೆ ಅಂದಿನ ಬೆಳಗಿನ ಕೆಂಬೆಳಕು ರಕ್ತ ಕೆಂಬಣ್ಣವಾಯಿತು. ಮಲ್ಲಪ್ಪ ಧನಶೆಟ್ಟಿಯವರು ದಿನನಿತ್ಯದಂತೆ ಸ್ನಾನ ಮುಗಿಸಿ ದೇವರಪೂಜೆಗೆ ಕುಳಿತರು. ಪತ್ನಿ ನೀಲವ್ವ ಮಡಿಯಿಂದ ನೀರಿನ ತಂಬಿಗೆ, ವಿಭೂತಿ, ಪತ್ರಿಗಳನ್ನಿತ್ತು ಪತಿಗೆ ಮಣೆ ಹಾಕಿದಳು. ಮಗು ಸಕ್ಕರೆ ಊದುಬತ್ತಿಗಳನ್ನಿತ್ತು ದೇವರಕೋಣೆಯಿಂದ ಸರಿದು ಹೋಯಿತು.

ಮಲ್ಲಪ್ಪನವರು ಮಣೆಯ ಮೇಲೆ ಕುಳಿತು ರಟ್ಟೆ, ಕೊರಳು ಹಣೆಗಳಿಗೆ ವಿಭೂತಿ ಧರಿಸಿದರು. ಕರಡಿಗೆಯಲ್ಲಿಯ ಲಿಂಗ ತೆಗೆದು ಹಸ್ತದಲ್ಲಿಟ್ಟು ನೀರೆರೆದರು. ಶಿವಮಂತ್ರ ಪಠಿಸುತ್ತ ಲಿಂಗದಲ್ಲಿ ದೃಷ್ಟಿಯನ್ನು ವಿಲೀನಗೊಳಿಸಿದರು.

ಅದೇ ಸಮಯಕ್ಕೆ ಸ್ತಬ್ಧವಾಗಿ ಧೂಳೆಬ್ಬಿಸುತ್ತ ಪೊಲೀಸ್ ವ್ಯಾನು ಬಂದು ಮಲ್ಲಪ್ಪ ಧನಶೆಟ್ಟಿಯವರ ಮನೆಯ ಮುಂದೆ ನಿಂತಿತು. ಇನ್ಸಪೆಕ್ಟರ್ ಮಿಸ್ಟರ್ ನಪೆಟ್, ಜಮಾದಾರ, ಫಕೀರ ಅಹಮದ ಅನೇಕ ಲಷ್ಕರಿ ಅಧಿಕಾರಿಗಳು, ಕಾನ್ಸಟೇಬಲಗಳು ಸಶಸ್ತ್ರರಾಗಿ ಕೆಳಗಿಳಿದರು. ಮನೆಯ ಸುತ್ತ ಮುತ್ತಿಗೆ ಹಾಕಿದರು. ಹತ್ತಿರದ ಎಲ್ಲ ದಾರಿಗಳಲ್ಲಿ ಬಾರು ಮಾಡಿದ ಬಂದೂಕುಗಳನ್ನು ಹಿಡಿದು ಪೋಲೀಸ ಅಧಿಕಾರಿಗಳು ಸೆಟೆದು ನಿಂತರು.

ಇನ್ಸಪೆಕ್ಟರ್ ನಪೇಟ ಮನೆಯ ಒಳಗೆ ಪ್ರವೇಶಿಸಿದ. ಮಲ್ಲಪ್ಪನ ಹೆಸರು ಹಿಡಿದು ಕರೆಯುತ್ತ ಮುಂದುವರೆದ ದೇವರ ಪೂಜೆಯಲ್ಲಿ ಮಗ್ನರಾಗಿದ್ದ ಮಲ್ಲಪ್ಪನವರ ಕಿವಿಯ ಮೇಲೆ ಇನ್ಸ್ಪೆಕ್ಟರನ ಸ್ವರ ಬಿದ್ದಿತು. ಅವರು ಕೈಯಲ್ಲಿಯ ಲಿಂಗ ಸಮೇತ ಹಾಗೆಯೇ ಎದ್ದು ಹೊರಬಂದರು.

"ಮಲ್ಲಪ್ಪ ಧನಶೆಟ್ಟಿ ಇವರೇ" ಎನ್ನುತ್ತ ಎಲ್ಲರೂ ತೋಳಗಳಂತೆ ಅವರ ಮೇಲೆ ಮುಗಿಬಿದ್ದರು. ಧೋತರ ಮಾತ್ರ ಉಟ್ಟಿದ್ದ ಬರಿಯ ಮೈಯ ಮಲ್ಲಪ್ಪನವರ ಕೊರಳಲ್ಲಿಯ ಶಿವದಾರದ ಬೆಳ್ಳಿ ಕರಡಿಕೆ ಬಾಯಿ ತೆರೆದಿತ್ತು. ಕೈಯಲ್ಲಿಯ ಕಪ್ಪರದ ಲಿಂಗ ಹಾಗೆಯೇ ಇತ್ತು. ಅವರ ಗದ್ದಲ ಧಕ್ಕೆಯಲ್ಲಿ ಕೈಯಿಂದ ಕೆಳಗುರುಳುತ್ತಿದ್ದ ಲಿಂಗವನ್ನು ಬಾಗಿ ಎತ್ತಿಕೊಂಡು ಧೋತರದ ಸೆರಗಿನಿಂದ ಮುಚ್ಚಿಕೊಂಡರು ಪೋಲೀಸ್ ಅಧಿಕಾರಿಗಳು ಅವರನ್ನು ಪೂಜೆ ಮುಗಿಸಲೂ ಬಿಡಲಿಲ್ಲ. ಅಂಗಿ ಧರಿಸಲೂ ಅವಕಾಶ ಕೊಡಲಿಲ್ಲ. ಹಾಗೆಯೇ ಅವರನ್ನು ಎಳೆದು ತಂದು ವ್ಯಾನಿನಲ್ಲಿ ಕುಳ್ಳಿರಿಸಿದರು. ಮಲ್ಲಪ್ಪನವರ ತಾಯಿ, ಪತ್ನಿಯರ, ಸೊಲ್ಲಾಪುರ ಜನತೆಯ ರೋಧನ ಸ್ವರ ಆ ಗದ್ದಲದಲ್ಲಿ ಬೆರೆಯಿತು. ಪೋಲೀಸ್ ವ್ಯಾನು ಸದ್ದು ಹೊರಡಿಸಿ ಮುಂದೆ ಚಲಿಸಿತು.

ಪೋಲೀಸ್ ಚೌಕಿಯಲ್ಲಿ ಅವರನ್ನು ತಂದು ಲಾಕಪ್‌ನಲ್ಲಿಟ್ಟು ಬೀಗ ಹಾಕಿದರು. ದಾರಿಯಲ್ಲಿ ಬರುವಾಗಲೇ ಪೋಲೀಸರು ಸುಡುವ ಸಿಗರೇಟಿನಿಂದ ಮಲ್ಲಪ್ಪನವರ ಬರಿಮೈಯನ್ನು ಅಲ್ಲಲ್ಲಿ ಸುಡತೊಡಗಿದರು. ಮಲ್ಲಪ್ಪನವರ ನಾಲಿಗೆಯಿಂದ ಶಿವಮಂತ್ರ, ಭಾರತಾಂಬೆಯ ಜಯಘೋಷ ಹೊರಟಿತು. ಪೋಲೀಸ ಲಾಕಪ್ಪಿನಲ್ಲಿ ಅವರು ಸಿಟ್ಟಿಗೆದ್ದ ಸಿಂಹದಂತೆ ಸುತ್ತಿದರು. ಮದವೇರಿದ ಗಜರಾಜನಂತೆ ಜಯಘೋಷವನ್ನು ಘೀಳಿಟ್ಟರು. 'ವಂದೇ ಮಾತರಂ' ಮಹಾತ್ಮಾ ಗಾಂಧೀಜಿಕೀ ಜೈ....."



ಅಂದಿನ ರಾತ್ರಿ ಮಲ್ಲಪ್ಪನವರಿಗೆ ಯಮಯಾತನೆ ಅವರೊಂದಿಗೆ ಬಂಧಿಸಲ್ಪಟ್ಟಿದ್ದ ಶ್ರೀ ಜಗನ್ನಾಥ ಶಿಂಧೆ, ಶ್ರೀ ಲಕ್ಷ್ಮೀನಾರಾಯಣ ಸಾರಡಾ, ಶ್ರೀ ಕುರ್ಬಾನ ಹುಸೇನ ಅವರನ್ನೂ ಕೈಕಾಲು ಬಿಗಿದು ಅಲ್ಲಾಡದಂತೆ ಕಟ್ಟಿದರು. ಮಲ್ಲಪ್ಪನವರ ಮೈಯ ಅರ್ಧ ಇಂಚು ಸ್ಥಳವೂ ಬಿಡದಂತೆ ಉರಿವ ಸಿಗರೇಟಿನಿಂದ ಸಿಪಾಯಿಗಳು ಸುಟ್ಟರು. ಶರೀರ ಉರಿಯತೊಡಗಿದಾಗ ಆ ರಕ್ಕಸ ಸಿಪಾಯಿಗಳು ಗಹಗಹಿಸಿದರು. ಕೂಡಲೂ ಬಾರದ, ಮಲಗಲೂ ಬಾರದ ಮೈ ಕೈಗಳ ಬಿಗಿಕಟ್ಟುಗಳು. ಸುಟ್ಟಗಾಯಗಳಿಂದ ಬೊಕ್ಕೆಯೆದ್ದು ಉರಿಯುತ್ತಿದ್ದ ಮೈಮೇಲೆ ಪೆಟ್ಟುಗಳ ದಾಳಿ. ಮೈಮೇಲೆಲ್ಲ ಕಪ್ಪು ನೀಲ ದರೆಗಳು ಎದ್ದು ನಿಂತುವು. ಮಲ್ಲಪ್ಪನವರು ತುಟಿಕಚ್ಚಿ ವೇದನೆ ನುಂಗಿದರು. ಪೋಲೀಸರ ಈ ಕ್ರೂರವರ್ತನೆಗೆ ರಾತ್ರಿ ತತ್ತರಿಸಿತು. ಗಾಳಿ ಗೋಳಿಟ್ಟಿತು.

ಮೇ ೧೪ ರಂದು ಬೆಳಿಗ್ಗೆ ೯ ಗಂಟೆಗೆ ಬಂಧಿಸಲ್ಪಟ್ಟ ಮಲ್ಲಪ್ಪನವರ ಸುದ್ದಿ ಎಷ್ಟೇ ಪ್ರಯತ್ನಿಸಿದರೂ ಅವರ ಮನೆಯವರಿಗೆ ಸಿಗಲಿಲ್ಲ. ಅವರನ್ನು ಎಲ್ಲಿಟ್ಟರು ? ಏನು ಮಾಡಿದರು? ಊಟಕ್ಕೆ ಕೊಟ್ಟರೆ ? ಇಲ್ಲವೇ ? ಒಂದೂ ತಿಳಿಸಲು ಅಧಿಕಾರಿಗಳು ತಯಾರಿರಲಿಲ್ಲ.

ಮಾರನೆಯ ದಿನ ಅಂದರೆ ಮೇ ೧೫ರಂದು ಬೆಳಿಗ್ಗೆ ಮಲ್ಲಪ್ಪ ಧನಶೆಟ್ಟಿಯವರ ಮಾಲಿಕ ಶ್ರೀ ಮೋತಿಚಂದ ಗಣೇಶ

ಪಂಡಾರಕರರು ಊಟ ತೆಗೆದುಕೊಂಡು ಪೋಲೀಸ ಠಾಣೆಗೆ ಹೋದರು. ಆದರೆ ಅವರಿಗೆ ಮಲ್ಲಪ್ಪನವರನ್ನು ಭೇಟಿ ಮಾಡಿಸ ಲಿಲ್ಲ. ಯಾರೊಬ್ಬರೂ ಒಂದೂ ಮಾಹಿತಿ ಕೊಡಲಿಲ್ಲ. "ನಿಮ್ಮ ಅಂಗಡಿಯ ಬೀಗದ ಕೈಗಳು ಫಕೀರ ಅಹಮದ ಜಮಾದಾರರ ಬಳಿಯಲ್ಲಿವೆ. ಅವು ನಿಮಗೆ ಸಿಗುತ್ತವೆ." ಇದಿಷ್ಟೇ ಹೇಳಲಾ ಯಿತೇ ವಿನಃ ಮಲ್ಲಪ್ಪನವರ ಬಗ್ಗೆ ಮಾತೇ ಆಡಲಿಲ್ಲ.

ಎರಡು ದಿನಗಳು ಗತಿಸಿದುವು. ಮಲ್ಲಪ್ಪನವರ ಸಮಾ ಚಾರವಿಲ್ಲ. ಅವರ ಮನೆಯವರ ಗೋಳು ಹೇಳತೀರದು. ಕೊನೆಗೆ ಅವರ ತಂದೆ ರೇವಣಸಿದ್ದಪ್ಪನವರು ಡಿಸ್ಟ್ರಿಕ್ಟ್ ಮೆಜಿಸ್ಟ್ರೇಟರಿಗೆ ತಂತಿ ಮೂಲಕ ವಿನಂತಿಸಿಕೊಂಡರು. "ತಮ್ಮ ಮಗನನ್ನು ಬಂಧಿ ಸಿದ ಕಾರಣವೇನು ? ಅವನು ಮಾಡಿದ ಅಪರಾಧವೇನು ? ಅವನಿಗೆ ಊಟ ನೀರು ಕೊಡಲು, ಅವನನ್ನು ಭೇಟಿ ಮಾಡಲು ದಯವಿಟ್ಟು ಅನುಮತಿ ಕೊಡಬೇಕು." ಎಂದು ಹೇಳಿಕೊಂಡರು. "ಭೇಟಿಗೆ ಅವಕಾಶವಿಲ್ಲ" ಎಂಬ ಉತ್ತರ ಸಿಕ್ಕಿತೇ ವಿನಃ ಅವರ ಇನ್ನಿತರ ಪ್ರಶ್ನೆಗಳಿಗೆ ಯಾವ ಉತ್ತರವೂ ಬರಲಿಲ್ಲ.

ಬಂಧಿಸಿದವರನ್ನು ವಿಜಾಪುರದ ಸೆರೆಮನೆಗೆ ಸಾಗಿಸಲು ಸರಕಾರ ಸಿದ್ಧವಾಯಿತು. ಜನರು ಗದ್ದಲ ಎಬ್ಬಿಸುವ ಸೂಚನೆ ಗಳು ಗೋಚರಿಸಿದುವು. ತಡಮಾಡದೆ ಅವರನ್ನು ಪುಣೆಯ ಯರವಾಡಾ ಸೆಂಟ್ರಲ್ ಜೈಲಿಗೆ ವರ್ಗಾಯಿಸಿದರು.

ಮಲ್ಲಪ್ಪ ಧನಶೆಟ್ಟಿಯವರ ಮೇಲೆ ಪೋಲೀಸರನ್ನು ಜೀವಂತ ದಹಿಸಿದಕೇಸ್ ಫೈಲ್ ಮಾಡಿದರು.ಪೋಲೀಸರನ್ನು ಸುಡುವಾಗ ನಿಜವಾಗಿ ಮಲ್ಲಪ್ಪನವರು ಅಲ್ಲಿದ್ದಿರಲಿಲ್ಲ; ಅಲ್ಲದೆ ಅದು ಅವರಿಗೆ



ಗೊತ್ತಿಲ್ಲದೆ ನಡೆದ ಘಟನೆ ಆಗಿದ್ದಿತು. ಮರಿಸ್ವಾಮಿ ಮತ್ತು ಸಿದ್ರಾಮಪ್ಪನವರೇ ಪ್ರಮುಖ ಹೊಣೆಗಾರರೆಂಬುದು ಎಲ್ಲರಿಗೂ ತಿಳಿದ ವಿಷಯ.

ಕೋರ್ಟಿನಲ್ಲಿ ಕೇಸು ನಡೆಯಿತು. "ಈ ಘಟನೆ ನಡೆದಾಗ ಅಲ್ಲಿ ಮಲ್ಲಪ್ಪನವರ ಜನರು ಯಾರೂ ಇರಲಿಲ್ಲ" ಎಂದು ಭುಲಾ ಭಾಯಿ ದೇಸಾಯಿಯವರು ವಾದಿಸಿದ್ದನ್ನು ಜಿಲ್ಲಾ ನ್ಯಾಯಾಧೀಶ ವಾಡಿಯಾ ಅವರು ನಂಬಲಿಲ್ಲ. ಅವರು ಆರೋಪಿಗಳಲ್ಲಿ ಮಲ್ಲಪ್ಪ ಧನಶೆಟ್ಟಿ, ಜಗನ್ನಾಥ ಶಿಂಧೆ, ಕುರ್ಬಾನ ಹುಸೇನ ಮತ್ತು ಶ್ರೀಕಿಷನ್ ಸಾರಡಾ ಅವರಿಗೆ ಗಲ್ಲಿನ ಶಿಕ್ಷೆಯನ್ನು ವಿಧಿಸಿದರು.

ಶಿಕ್ಷೆಯ ಮುನ್ನ ಕೋರ್ಟ ಮಲ್ಲಪ್ಪನವರ ಮೇಲೆ ವಿಚಾ ರಣೆ ನಡೆಸಿತು. "೧೯೩೦ ರ ಮೇ ೮ ರಂದು ಮಂಗಳವಾರ ಪೇಟೆಯ ಪೋಲೀಸ್ ಠಾಣೆಯ ಮುಂದೆ ನಡೆದ ಪೋಲಿಸರ ಜೀವಂತ ಸುಡುವಿಕೆಯಲ್ಲಿ ನೀವು ಇದ್ದಿರೇನು ?"

"ಇಲ್ಲ. ನಾನಲ್ಲಿ ಖಂಡಿತ ಇರಲಿಲ್ಲ. ಮಲ್ಲಪ್ಪನವರು ಉತ್ತ ರಿಸಿದರು.

"ನೀವು ಮಂಗಳವಾರ ಪೇಟೆಯ ಪೋಲೀಸ ಚೌಕಿಯ ಮೇಲೆ ದಾಳಿ ಮಾಡಿದ್ದಿರೇನು?"

"ಇಲ್ಲ."

"ಉಳಿದೆಲ್ಲ ಜನರೊಂದಿಗೆ ನೀವು ಆ ಪೋಲೀಸ್ ಪೇದೆಗ ಳನ್ನು ಹಿಡಿದು ಹೊರಗೆಳೆದು ತಂದಿರೇನು?."

"ಇಲ್ಲ."

"ಅವರನ್ನು ಕೊಂದಿರೇನು?"

"ಇಲ್ಲ. ಖಂಡಿತ ಇಲ್ಲ."

"ದಾದಾ ಜಾಫರನನ್ನು ಸುಟ್ಟಿರೇನು?"

"ಇಲ್ಲ."

"ಮತ್ತೇನಾದರೂ ಹೇಳುವುದಿದೆಯೆ ನಿಮಗೆ ?"

ಕೋರ್ಟಿನ ಪ್ರಶ್ನೆಗೆ ಮಲ್ಲಪ್ಪನವರು ದೀರ್ಘ ಉಸಿರೆಳೆದು ಹೇಳಿದರು.

"ಹೌದು. ನನಗೆ ಬಹಳಷ್ಟು ಹೇಳುವುದಿದೆ. ಹಿಂದೂ ಮುಸಲ್ಮಾನರ ಖಟ್ಲೆಯಿಂದ ಹಿಂದೊಮ್ಮೆ ನಾನು ನಿರ್ದೋಷಿ ಎಂದು ಕೋರ್ಟಿನಿಂದ ಮುಕ್ತನಾಗಿದ್ದೆ. ಅಂದಿನಿಂದಲೂ ನನ್ನ ಮೇಲೆ ಪೋಲೀಸರ ಕಣ್ಣು ಇದ್ದೇ ಇದೆ. ನನ್ನನ್ನು ಬಂಧಿಸಿದ ದಿನವೇ ನನ್ನನ್ನು ಮಿಲಿಟರಿಯ ವಶಕ್ಕೆ ಕೊಟ್ಟರು. ಈ ಕೇಸು ಸುಳ್ಳಿನ ಮೇಲೆ ಕಟ್ಟಲಾಗಿದೆ. ಅಂದಿನ ದಂಗೆಯ ಸ್ಥಳದಲ್ಲಿ ನಾನು ಇರಲೇ ಇಲ್ಲ. ನಾನು ಸಂಪೂರ್ಣ ನಿರಪರಾಧಿ. ಇದರಲ್ಲಿ ನನ್ನದೇನೂ ತಪ್ಪಿಲ್ಲ. ನಾನಾವ ತಪ್ಪೂ ಮಾಡಿಲ್ಲ....ನಾನು ನಿರಪರಾಧಿ."

ಮಲ್ಲಪ್ಪನವರು ಹೇಳಿದರು. ಇದೇ ರೀತಿ ಉಳಿದ ಮೂವರ ವಿಚಾರಣೆಯೂ ಮುಗಿಯಿತು. ನಂತರ ಮಲ್ಲಪ್ಪ ಧನಶೆಟ್ಟಿಯವರು ತಮ್ಮ ವಕೀಲರನ್ನು ನೋಡಿ ಕೋರ್ಟಿಗೆ ವಿನಂತಿಸಿಕೊಂಡರು.

"ನನಗೆ ಮಾತಾಡಲು ಕೋರ್ಟು ಅಪ್ಪಣೆಕೊಡಬೇಕು. ನನಗಿನ್ನೂ ಹೇಳುವುದಿದೆ..."

"ಹೇಳ್ರಿ.... ಏನು ಹೇಳಬೇಕಾಗಿದೆ.... ಕೋರ್ಟಿನ ಅನುಮತಿ ಇದೆ."



"ಸಾಹೇಬ್ರ.... ಇದೆಲ್ಲ ನಮ್ಮ ಮೇಲೆ ಅನ್ಯಾಯ ನಡ್ಲೀಕತ್ತದರಿ..." ಒಂದ ಮಾತ ನೀವು ಬರದಿಟ್ಟಕೊಳ್ರಿ .. ರೂಪಾಭವಾನಿಯ ದಂಗೆಯಲ್ಲಿ ಅವತ್ತು ನಾನಲ್ಲಿ ಹಾಜರ ಇಲ್ಲದಿದ್ರ ಕಲೆಕ್ಟರ ಸಾಹೇಬ ಖಂಡಿತ ಜೀವದಿಂದ ಉಳೀತಿರಲಿಲ್ಲ. ಜನರು ಸಿಟ್ಟಿಗೆದ್ದು ಕಲ್ಲು ತೂರಲಿಕತ್ತರು. ಕಲ್ಲಿನ ಮಳೀನೇ ಸುರೀತು. ನೋಡ್ದ ಕಡಿಲಿಂದೆಲ್ಲ ಭರ್ರಭರ್ರಂತ ಕಲ್ಲಗೋಳು ಬೀಸಿ ಬರಾಮುಂದ ನಾನೇ ಲಾಠಿ ತಿರಗಸಗೋತ ಆ ಕಲ್ಲುಗೋಳು ಕಲೆಕ್ಟರಗ ಬಡೀಲಾರ್ದಂಗ ಮಾಡಿ ಅವರಿಗೆ ಜೀಪಿನ ತನಕಾ ಕರಕೊಂಡು ಒಯ್ದು ಕೂಡಿಸಿದ್ದು. ನಾನು ಮಹಾತ್ಮಾ ಗಾಂಧೀಜಿಯ ಅನುಯಾಯಿ. ಅಹಿಂಸಾವಾದಿ. ಹಿಂಸೆಗೆ ಎಂದೂ ಪ್ರೋತ್ಸಾಹ ಕೊಟ್ಟವನಲ್ಲ ಕಲೆಕ್ಟರ, ಡಿ. ಎಸ್. ಪಿ. ಪೋಲೀಸರ ಪ್ರಾಣ ಉಳಿಸಿದೆ. ಈ ಮಾತು ನಿಜವೋ ಸುಳ್ಳೋ ಅಂತ ಬೇಕಾದ್ರೆ ಕಲೆಕ್ಟರ ಸಾಹೇಬರನ್ನು ಇಲ್ಲಿಗೆ ಕರೆಸಿ ಅವರ ಕೈಯಲ್ಲಿ ಅವರ ಧರ್ಮದ ಪುಸ್ತಕ ಬಾಯಿಬಲ್ ಕೊಟ್ಟು ಕೇಳ್ರಿ. ಸಾಹೇಬ್ರೇ.... ನಾ ಆ ಜನರಲ್ಲಿದ್ದೆ ನಿಜ. ನಾ ಅಲ್ಲಿದ್ದದ್ದರಿಂದಲೇ ಕಲೆಕ್ಟರ ಸಾಹೇಬ್ರು ಜೀವಂತ ಉಳದ್ರು. ಕಲೆಕ್ಟರನಂತಹ ಒಬ್ಬ ದೊಡ್ಡ ಅಧಿಕಾರಿಯ ಜೀವ ಉಳಿಸಿದವನು ಸಾದಾರಣ ಒಬ್ಬ ಪೋಲೀಸ ಪೇದೆಯ ಪ್ರಾಣ ತೆಗೆದುಕೊಳ್ಳಬಹುದೇ ? ನೀವೇ ವಿಚಾರ ಮಾಡಿ ನೋಡ್ರಿ. ಮಂಗಳವಾರಪೇಟೆ ಪೋಲೀಸ್ ಠಾಣೆಯ ಆ ದಂಗೆಯಲ್ಲಿ ಮಾತ್ರ ನಾನು ಖಂಡಿತ ಇರಲಿಲ್ಲ. ಇದನ್ನು ನಾನು ಪ್ರಮಾಣ ಮಾಡಿ

ಹೇಳ್ತೇನೆ."

ಮಲ್ಲಪ್ಪ ಧನಶೆಟ್ಟಿಯವರು ನಿಜವಾಗಿ ನಡೆದದ್ದನ್ನೆಲ್ಲ ಹೇಳಿದರು. ಇಷ್ಟೆಲ್ಲ ಕೇಳಿಯೂ ಕೋರ್ಟು ಮಲ್ಲಪ್ಪನವರ ಪ್ರಾಮಾಣಿಕವಾದ ಅಂತರ್ಯದಿಂದ ಬಂದ ಮಾತುಗಳಿಗೆ ಕಿವುಡಾಯಿತು.

೧೯೩೦ ಜೂನ ತಿಂಗಳ ೬ ರಂದು ಸೆಶನ್ಸನ್ಯಾಯಾಧೀಶರಾದ ಮಿಸ್ಟರ್ ವಾಡಿಯಾ ಅವರು ಕೆಳಗಿನಂತೆ ತೀರ್ಪು ಕೊಟ್ಟರು. ತೀರ್ಪು ಕೊಡುತ್ತ ಅವರು ನುಡಿದರು. "ಪೋಲೀಸ್ ಕಾನ್ಸಟೇಬಲ್‌ನನ್ನು ಜೀವಂತ ದಹಿಸಿದ ಸ್ಥಳದಲ್ಲಿ ಇವರು ಇರಲಿಲ್ಲ ಎಂದು ನಂಬುವುದು ಕಷ್ಟ. ಮಾರ್ಶಲ್ ಲಾ ಕ್ಕೆ ಹೆದರಿ ಯಾರೂ ಇವರ ಕಡೆಗೆ ಸಾಕ್ಷ್ಯಿ ಹೇಳುತ್ತಿಲ್ಲ ಎನ್ನುವುದೂ ನಂಬಲಾಗದ ಸಂಗತಿ. ಈ ಕೇಸಿನಲ್ಲಿ ಮಾರ್ಶಲ್ ಲಾ ಯಾವ ರೀತಿಯಿಂದಲೂ ಆತಂಕವಾಗುತ್ತದೆಂದು ನನಗೆನಿಸುವುದಿಲ್ಲ. ಆ ಘಟನೆಯಲ್ಲಿ ಈ ನಾಲ್ವರ ಕೈಯಿತ್ತು ಎನ್ನುವ ಆರೋಪ ಸಾಬೀತಾಗಿದೆ. ಈ ನಾಲ್ಕು ಜನರು ದೋಷಿಗಳಾಗಿದ್ದಾರೆ. ಆದ್ದರಿಂದ ನಾನು ಈ ನಾಲ್ವರಿಗೂ ಫಾಸಿ ಶಿಕ್ಷೆಯನ್ನು ವಿಧಿಸುತ್ತೇನೆ."

ನಾಲ್ಕೂ ಜನರ ಅಪೀಲುಗಳು ಹೈಕೋರ್ಟಿಗೆ ಹೋದವು. ಯಾವ ಪ್ರಯೋಜನವೂ ಆಗಲಿಲ್ಲ. ಚೀಫ್ ಜಸ್ಟೀಸ್ ಬಿ. ಮೌಂಟ್ ಮತ್ತು ಜಸ್ಟೀಸ್ ಮಡಗಾಂಕರ ಇಬ್ಬರೂ ಭಾರತದ ಕ್ರಾಂತಿವೀರ ಮಲ್ಲಪ್ಪ ಧನಶೆಟ್ಟಿಯವರಿಗೆ ಗಲ್ಲಿನ ಶಿಕ್ಷೆ ಖಾಯಂ ಗೊಳಿಸಿದರು,

ಭಾರತದ ಶ್ರೇಷ್ಠ ವಕೀಲರಾದ ಭುಲಾಭಾಯಿ ದೇಸಾಯಿ, ಚಿಮಣಲಾಲ ಸೆಟಲ್‌ವಾಡ ಅವರು ಅಂದಿನ ಪ್ರೀವ್ಹಿ ಕೌನ್ಸಿಲ್



ಮುಂದೆ ದಾಖಲು ಮಾಡಲು ತಕ್ಷಣ ಮಲ್ಲಪ್ಪನವರ ಅಪೀಲನ್ನು ಇಂಗ್ಲಂಡಿಗೆ ಕಳಿಸಿದರು. ಆದರೆ ನ್ಯಾಯಮೂರ್ತಿ ಲಾರ್ಡ ಥ್ಯಾಂಕರಟನ್‌ರವರು ಆ ಅಪೀಲನ್ನು ವಜಾ ಮಾಡಿದರು. ನಾಲ್ಕು ಜನರಿಗೂ ಗಲ್ಲಿನ ಶಿಕ್ಷೆಗೆ ಕೊನೆಯ ಮಂಜೂರಿಯ ಮುದ್ರೆ ಬಿದ್ದಿತು.

## ಗಲ್ಲಿನ ಶಿಕ್ಷೆಯ ವಿರುದ್ಧ ಅಂದೋಲನ

ಗಲ್ಲಿನ ಶಿಕ್ಷೆ ರದ್ದಾಗದ ಸುದ್ದಿ ಸೊಲ್ಲಾಪುರದ ಜನತೆಯ ಮೇಲೆ ಬರಿಸಿಡಿಲಿನಂತೆರಗಿತು. ಜನತೆಯ ಹಾಹಾಕಾರ ಆಗಸಕ್ಕೇರಿತು. ನೋಡಿದಲ್ಲೆಲ್ಲ ಜನರ ನಡುವೆ ಮಲ್ಲಪ್ಪನವರ ಸುದ್ದಿಯೇ. ಎಲ್ಲರ ನಾಲಿಗೆಯ ಮೇಲೆ ಅವರ ಮಾತುಗಳೇ. ಕಣ್ಣಲ್ಲಿ ಕಾತರ ತುಂಬಿಕೊಂಡು, ಕೈಯಲ್ಲಿ ಜೀವ ಹಿಡಿದುಕೊಂಡು ಕೋರ್ಟಿನ ಫಲಿತಾಂಶಕ್ಕಾಗಿ ಕಾದಿದ್ದ ಜನತೆ ತತ್ತರಿಸಿತು.

ಕಾನೂನಿನ ದಾರಿಗಳೆಲ್ಲ ಕೊನೆಗೊಂಡವು. ದುಂಡು ಮೇಜಿನ ಪರಿಷತ್ತಿಗೆ ಲಂಡನ್ನಿಗೆ ಹೋದ ಭಾರತದ ಶ್ರೀಜಯಕರ ಡಾ: ತೇಜಬಹದ್ದೂರ ಸಪ್ರು, ಬಿಕಾನೇರದ ಮಹಾರಾಜ, ಡಾ: ಮುಂಜೆ—ಎಲ್ಲರೂ ಈ ಫಾಸಿ ಶಿಕ್ಷೆಯನ್ನು ತಪ್ಪಿಸುವುದಕ್ಕಾಗಿ ಸರ್ವರೀತಿಯಿಂದ ಶಕ್ತಿಮೀರಿ ಪ್ರಯತ್ನಿಸಿದರು.

'ಗಲ್ಲಿನ ಶಿಕ್ಷೆ ಯಾರಿಗೂ ವಿಧಿಸಕೂಡದು' ಎಂಬ ಬಗ್ಗೆ ಇಂಗ್ಲಂಡಿನಲ್ಲಿ ಪಾರ್ಲಿಮೆಂಟರಿ ಕಮಿಟಿ ನಿಯಮಿಸಿದ ಸಮಿತಿಯ

ಅಧ್ಯಕ್ಷರೆ. ಜೇಮ್ಸಬಾರ ಅವರಿಗೆ ಪುಣೆಯ "ಕ್ರಿಶ್ಚಿಯನ ಸೇವಾ ಸಂಸ್ಥೆ" ಯ ಫಾದರ ವಿನ್ಸಲೊ ಅವರು ತಂತಿ ಸಂದೇಶ ಕಳಿಸಿ "ಯಾವ ತತ್ವದ ಮೇಲೆ ನಮ್ಮ ಸಂಸ್ಥೆ ಗಲ್ಲಿನ ಶಿಕ್ಷೆ ವಿಧಿಸಬಾರದೆಂಬ ನಿರ್ಣಯ ತೆಗೆದುಕೊಂಡಿದೆಯೋ ಅದೇ ತತ್ವವನ್ನು ಗಮನದಲ್ಲಿಟ್ಟುಕೊಂಡು; ಸೊಲ್ಲಾಪುರದ ಮಲ್ಲಪ್ಪ ಧನಶೆಟ್ಟಿ ಮತ್ತಿತರು ಮೂವರು ಆರೋಪಿಗಳ ಮೇಲೆ ದಯೆ ತೋರಿಸಿ ಅವರ ಫಾಸಿ ಶಿಕ್ಷೆಯನ್ನು ರದ್ದುಗೊಳಿಸಬೇಕು. ಈ ಬಗ್ಗೆ ಭಾರತದ ಮಂತ್ರಿ ನಾ. ವೆಜವುಡ್ ಬೆನ್ ಅವರಿಗೆ ನನ್ನ ಪರವಾಗಿ ವಿನಂತಿಸಿಕೊಳ್ಳಬೇಕು." ಎಂದು ಕೇಳಿಕೊಂಡರು. ಈ ತಂತಿಗೆ ಜೇಮ್ಸಬಾರ ಅವರಿಂದ "ನಿಮ್ಮ ತಂತಿಯನ್ನು ವೆಜವುಡ್ ಬೆನ್ ಅವರ ಮುಂದೆ ಇಡಲಾಗುತ್ತಿದೆ. ಸಾಧ್ಯವಿದ್ದಷ್ಟು ಪ್ರಯತ್ನ ಮಾಡಲಾಗುವುದು" ಎಂಬ ಮಾರುತ್ತರ ಬಂದಿತು.

ಭಾರತದ ಜನತೆ ಮರಮರ ಮರುಗಿತು. ಕಣ್ಣೀರು ಕೋಡಿ ಹರಿಸಿದರು. ಊರು ಊರುಗಳಿಂದ, ಸಂಘ ಸಂಸ್ಥೆಗಳಿಂದ ಮಲ್ಲಪ್ಪನವರನ್ನು ಬಿಡುಗಡೆ ಮಾಡಬೇಕೆಂಬ ತಂತಿಗಳು ಹೋದುವು. ಸೊಲ್ಲಾಪುರ, ಪುಣೆ, ಮುಂಬಯಿ, ಪಂಜಾಬ, ಕರ್ನಾಟಕ, ಆಂಧ್ರ, ಗುಜರಾತ, ಮದ್ರಾಸ್ ಮೊದಲಾದ ಕಡೆಗಳಲ್ಲೆಲ್ಲ ಹರತಾಳ ಆಚರಿಸಲಾಯಿತು. ಮುಂಬಯಿಯಲ್ಲಿ ಮೂರು ದಿನಗಳಲ್ಲಿಯೇ ಒಂದು ಲಕ್ಷ ಸಹಿಗಳನ್ನು ಸಂಗ್ರಹಿಸಿ ಇವರನ್ನು ಬಿಡುಗಡೆ ಮಾಡಬೇಕೆಂಬ ಕೋರಿಕೆಯ ಅರ್ಜಿಯನ್ನು ವಾಯಿಸ್‌ರಾಯರಿಗೆ ಕಳಿಸಲಾಯಿತು. ಮುಂಬಯಿಯಲ್ಲಿಯ ಅತ್ಯಂತ ಸಿರಿವಂತ ಹಾಗೂ ಮರ್ಯಾದೆವಂತ ಮಹಿಳೆ



ಯರಿಬ್ಬರು ದಿನ ರಾತ್ರಿ ಗಲ್ಲಿಗಲ್ಲಿಗಳಲ್ಲಿ ಕಾಲ್ನಡಿಗೆಯಿಂದ ಸುತ್ತಿ ಒಂದು ಲಕ್ಷ ಮಹಿಳೆಯರ ರುಜುಗಳನ್ನು ಸಂಗ್ರಹಿಸಿದರು. ಲೇಡಿ ಟಾಟಾ ಮತ್ತು ಲೇಡಿ ಸ್ಟೆಂವಾ ಎಂಬ ಈ ಮಹಿಳೆಯರು ಮಲ್ಲಪ್ಪ ಮತ್ತಿತರರ ಗಲ್ಲಿನ ಶಿಕ್ಷೆಯ ರದ್ದುಗೊಳಿಸುವಿಕೆಗಾಗಿ ಮಹಿಳೆಯರದೇ ಪ್ರತ್ಯೇಕ ಅರ್ಜಿಯನ್ನು ವಾಯಿಸರಾಯ ಮತ್ತು ಗರ್ವನರರ ಕಡೆಗೆ ಸಲ್ಲಿಸಿದರು. ದೇಶದ ಎಲ್ಲೆಡೆಯಲ್ಲಿಯೂ ಫಾಸಿ ಶಿಕ್ಷೆಯ ವಿರುದ್ಧ ಆಂದೋಲನಗಳು ನಡೆದವು. ಎಲ್ಲ ಜಾತಿ, ವರ್ಗಗಳ ಸಂಘ ಸಂಸ್ಥೆಗಳು ತಂತಿಗಳನ್ನು ಕಳಿಸಿದವು. ಬ್ಯಾರಿಸ್ಟರ ಜಯಕರ, ಬ್ಯಾರಿಸ್ಟರ ಸಪ್ರು ಮೊದಲಾದ ಮುಖಂಡರು ಲಾರ್ಡ ಐರ್ವಿನ್ನರನ್ನು ಕಾಣಲು ಹೋದರು. ಅಂದಿನ ಬ್ಯಾರಿಸ್ಟರ್ ಎಂ. ಸಿ. ಛಗಲಾ ಅವರು "ಬ್ರಿಟಿಷರ ರಾಜ್ಯದಲ್ಲಿ ಕರುಣೆಯ ಸುಸ್ವರ ಕೇಳಬೇಕೇ ವಿನಃ ಭಯಾನಕ ಮೃತ್ಯುರೋದನ ಕೇಳಬಾರದು" ಎಂದು ತಂತಿ ಕಳಿಸಿ, ಮಲ್ಲಪ್ಪನವರಿಗೆ ಕರುಣೆ ತೋರಿಸಬೇಕೆಂದು ವಿನಂತಿಸಿಕೊಂಡರು.

ಅಂದಿನ ಎಲ್ಲ ಪತ್ರಿಕೆಗಳ ಮುಖ ಪುಟಗಳೂ ಮಲ್ಲಪ್ಪ ಮತ್ತಿತರರ ಗಲ್ಲಿನ ಶಿಕ್ಷೆಯನ್ನು ರದ್ದುಗೊಳಿಸಬೇಕೆಂಬ ಬರಹಗಳಿಂದ ತುಂಬಿ ಹೊರಬರುತ್ತಿದ್ದವು. "ಇಂಡಿಯನ್ ಡೈಲಿ ಮೈಲ್" ಎಂಬ ಇಂಗ್ಲೀಷ ಪತ್ರಿಕೆ ಮಲ್ಲಪ್ಪನವರ ಬಿಡುಗಡೆಗಾಗಿ ಬಹಳಷ್ಟು ಪ್ರಯತ್ನಿಸಿತು. ಜನತೆಯ ಪರವಾಗಿದ್ದ ಎಲ್ಲ ಪತ್ರಿಕೆಗಳಲ್ಲಿದ್ದ ಬರಹಗಳು, ಪ್ರಾರ್ಥನೆಗಳು, ಜನತೆ

ಮಲ್ಲಪ್ಪನವರ ಮೇಲಿಟ್ಟಿದ್ದ ಪ್ರೀತಿ, ಗೌರವಗಳಿಗೆ ಸಾಕ್ಷಿಯಾಗಿವೆ.

"ಕಾಯಿದೆ, ಕಾನೂನು, ಭೂತದಯೆ — ಇವುಗಳಲ್ಲಿ ಯಾವ ದೃಷ್ಟಿಕೋನದಿಂದ ಪರಿಶೀಲಿಸಿದರೂ ಈ ಪ್ರಕರಣ ವಾಯಿಸರಾಯರು ದಯೆ ತೋರುವಂಥದ್ದಾಗಿದೆ" ಪುಣೆಯ ರೇ ಮಾರ್ಕೆಟ ನಡುವಿನ ಪ್ರಚಂಡವಾದ, ಕಿಕ್ಕಿರಿದ ಸಭೆಯಲ್ಲಿ ಭಾಷಣ ಮಾಡುತ್ತ ಫಾದರ ವಿನ್ಸಲೋ ಎಂ. ಎ. ಅವರು ಕಳಕಳಿಯಿಂದ ಮೇಲಿನಂತೆ ಉದ್ಗಾರ ಹೊರಡಿಸಿದರು.

ಎಲ್ಲ ಧರ್ಮ, ಎಲ್ಲ ಮತ, ಎಲ್ಲ ಪಂಥಗಳ ಜಗದ್ಗುರುಗಳು ವಾಯಿಸರಾಯರಿಗೆ ಪ್ರಾರ್ಥಿಸಿಕೊಂಡರು. ಎಲ್ಲ ಪಕ್ಷಗಳೂ ನಿರ್ಣಯದ ವಿರುದ್ಧ ಮತ ಪ್ರದಶಿಸಿದವು. ಇಂದೂರು ತಂಜಾವೂರ, ಉಜ್ಜಯಿನಿ, ಕರಾಚಿ, ರಂಗೂನ, ಕೊಚ್ಚಿನ, ಮೀರತ್, ಫರೀದ್‌ಪುರ, ಲಾಹೋರ ಎಲ್ಲ ಮಹಾನಗರಗಳಲ್ಲಿ ಗಲ್ಲಿನ ಶಿಕ್ಷೆಯ ವಿರುದ್ಧ ಸಭೆಗಳು ನಡೆದವು. ಸಮ್ಮೇಳನಗಳಾದುವು. ಠರಾವುಗಳನ್ನು ಪಾಸುಮಾಡಿ ವಾಯಿಸರಾಯನಿಗೆ ಕಳಿಸಲಾಯಿತು. ಎಲ್ಲರ ಕೂಗು ಒಂದೇ, ಎಲ್ಲರ ಪ್ರಾರ್ಥನೆ ಒಂದೇ, ಎಲ್ಲರ ಹೆಬ್ಬಯಕೆ ಒಂದೇ. ಅದು: "ಅಹಿಂಸಾವಾದಿ ಮಲ್ಲಪ್ಪನವರಿಗೆ, ಗಾಂಧೀಜಿ ಅನುಯಾಯಿ ಮಲ್ಲಪ್ಪನವರಿಗೆ, ವಿಧಿಸಿರುವ ಗಲ್ಲಿನ ಶಿಕ್ಷೆಯನ್ನು ರದ್ದುಗೊಳಿಸಿಬೇಕು.

ತಾತ್ಯಾಸಾಹೇಬ ಕೇಳ್ಕರ್‌ರು ದಿನಾಂಕ ೧೩-೧೨-೧೯೩೦ರ 'ಕೇಸರಿ' ಪತ್ರಿಕೆಯಲ್ಲಿ ಬರೆದು ಪ್ರಕಟಿಸಿದರು: "ಮಾರ್ಶಲ್



ಲಾ ಕಾರಣದಿಂದ ಆರೋಪಿಗಳು ಮುಂದೆ ಬರಲಾಗಲಿಲ್ಲ ಫಿರ್ಯಾದಿ ಪಕ್ಷ ಅಷ್ಟು ಸಮಾಧಾನಕರವಿರದಿದ್ದರೂ ಮುಂದೆ ಬಂದಿತು. ಈ ಸಂಬಂಧದಲ್ಲಿ ನ್ಯಾಯಮೂರ್ತಿಗಳಲ್ಲಿ ಭಿನ್ನಾಭಿಪ್ರಾಯ ಉಂಟಾಯಿತು. ಆಗ 'ಸಂಶಯ' ದ ಲಾಭ ಈ ನಾಲ್ಕು ಜನರಿಗೂ ಸಿಗಬೇಕಾದುದು ಸರ್ವ ಯೋಗ್ಯ. ಬೇರಾವ ಖಟ್ಲೆ ಇದ್ದರೂ ಅಲ್ಲಿ 'ಸಂಶಯ' ದ ಲಾಭ ಸಿಕ್ಕೇ ಸಿಗುತ್ತಿತ್ತು. ಆರೋಪಿಗಳಿಗೆ ದಯೆ ತೋರಿದ್ದರೆ ಆ 'ದಯೆ' ಯ ಅಧಿಕಾರ ದುರುಪಯೋಗವಾಗಲು ಖಂಡಿತ ಸಾಧ್ಯವಿರಲಿಲ್ಲ. ಗಲ್ಲಿನ ಶಿಕ್ಷೆಯ ರದ್ದುಗೊಳಿಸುವಿಕೆಗಾಗಿ ಜನರ ಬೇಡಿಕೆ ಹೆಚ್ಚಿದಂತೆಲ್ಲ ಸರ್ಕಾರದ ನಿಲುವು ಗಟ್ಟಿಯಾಗತೊಡಗಿತು. ಕೊನೆಗೆ ಎಲ್ಲ ಪ್ರಭಾವಿ ಜನರ, ರಾಷ್ಟ್ರ ಧುರೀಣರ, ಧರ್ಮಗುರುಗಳ ವಿನಂತಿಯ ತಂತಿಗಳನ್ನೂ ಲಾರ್ಡ ಐರ್ವಿನ್ ಮನ್ನಿಸಲಿಲ್ಲ. ಭೇಟಿಯಾಗಲು ಬಂದವರಿಗೆ ಭೇಟಿಯನ್ನು ನಿರಾಕರಿಸಿದ. ಅವನ ನಿರಾಕರಣೆಗೆ ಪ್ರತಿಭಟಿಸಿ ಮಹಾತ್ಮಾ ಗಾಂಧೀಜಿಯವರ ಆಪ್ತ ಕಾರ್ಯದರ್ಶಿ ಮಹಾದೇವಭಾಯಿ ದೇಸಾಯಿ ಉಪವಾಸ ಪ್ರಾರಂಭಿಸಿದರು. ಅವರೂ ಆಗ ಯರವಡಾ ಸೆರೆಮನೆಯಲ್ಲಿದ್ದರು.ಕೊನೆಗೆ ಬ್ರಿಟಿಷ್ ಸರ್ಕಾರ ಮಲ್ಲಪ್ಪನವರಿಗಿತ್ತ ನಿಷ್ಠುರವಾದ ಗಲ್ಲಿನ ಶಿಕ್ಷೆಯನ್ನು ನಿಶ್ಚಯ ಮಾಡಿಯೇ ಬಿಟ್ಟಿತು.

ದಿನ ನಿತ್ಯವೂ ಯರವಡಾ ಜೈಲಿನಲ್ಲಿ ಹೊರಗಿನ ಸುದ್ದಿಗಳು ಸುಳಿದು ಬರುತ್ತಿದ್ದುವು. ಜನತೆ ತಮ್ಮ ಶಿಕ್ಷೆಯ ವಿರುದ್ಧ ನಡೆಸಿದ್ದ ಚಳುವಳಿ, ಅಂದೋಲನದ, ಬೇಡಿಕೆಗಳೆಲ್ಲ ಮಲ್ಲಪ್ಪ ಧನಶೆಟ್ಟಿ ಮತ್ತು ಇತರರ ಕಿವಿ ತಾಗುತ್ತಿದ್ದುವು. ಜನತೆ ತಮ್ಮ

ಮೇಲಿಟ್ಟ ಪ್ರೀತಿ ವಿಶ್ವಾಸ, ಗೌರವಗಳನ್ನು ಕೇಳಿ ಅವರ ಕಣ್ಣುಗಳಲ್ಲಿ ನೀರು ತುಳುಕಿತು. ಮೃತ್ಯುವಿನ ನೆರಳಿನಲ್ಲಿ ನಿಂತು ನಿಟ್ಟುಸಿರಿಟ್ಟರು.

## ಸಾಯುತ್ತೇವೆ, ಸಗ್ಗುವದಿಲ್ಲ

ಇದೇ ಸಂದರ್ಭದಲ್ಲಿ ಮಲ್ಲಪ್ಪ ಧನಶೆಟ್ಟಿಯವರ ದೊಡ್ಡಪ್ಪನ ಮಗ ಶಂಕರಪ್ಪ ಧನಶೆಟ್ಟಿ ಒಂದು ದಿನ ಕಾರಾಗೃಹ ಪ್ರವೇಶಿಸಿ ತಮ್ಮನ ಭೇಟಿಗಾಗಿ ಅರ್ಜಿ ಸಲ್ಲಿಸಿದರು. ಅವರ ಮನಸ್ಸು ವಿಚಾರಗಳ ತಾಕಲಾಟದಲ್ಲಿ ಜರ್ಝರಿತವಾಗಿತ್ತು. ಈಗ ಉಳಿದಿರುವುದು ಒಂದೇ ದಾರಿ. ಕೊನೆಯ, ಅಂತಿಮ ದಾರಿ. ಸ್ವತಃ ಆರೋಪಿಗಳೇ ದಯೆಗಾಗಿ ಕೋರಿ ಅರ್ಜಿ ಸಲ್ಲಿಸುವುದು. ಹಾಗೆ ದಯಾಭಿಕ್ಷೆ ಬೇಡಿ ಬರೆದ ಅರ್ಜಿಯ ಮೇಲೆ ರುಜು ಮಾಡು ಎಂದು ಸ್ವಾತಂತ್ರ್ಯ ಹೋರಾಟಗಾರ, ಸ್ವಾಭಿಮಾನಿ, ಕ್ರಾಂತಿವೀರ ಮಲ್ಲಪ್ಪನನ್ನು ಹೇಗೆ ಕೇಳುವುದು ? ಕೇಳಿದರೆ ಅವನು, ಅವನ ಸಂಗಡಿಗರಾದ ಆ ಮೂವರು ಸಹಿ ಮಾಡಬಹುದೇ ? ಮಾಡದಿದ್ದರೆ ಮುಂದೇನು ಗತಿ ? ಎಂದು ಚಿಂತಿಸುತ್ತಿರುವಾಗಲೇ ಶಂಕರಪ್ಪನವರಿಗೆ ಒಳಗೆ ಪ್ರವೇಶಿಸಲು ಕರೆ ಬಂದಿತು. ಧೋತರದ ಸೆರಗಿನಿಂದ ಕಣ್ಣೊರೆಸಿಕೊಂಡು ಒಳ ನಡೆದರು.

ತಮ್ಮನ ಬಳಿ ಬಂದು ನಿಂತರು. ಮನಸ್ಸು ಗಟ್ಟಿ ಮಾಡಿಕೊಂಡು ಉಕ್ಕಿ ಹರಿವ ಕಂಬನಿ ತಡೆದು ಶಂಕರಪ್ಪ ಕೊನೆಗೂ ಮಾತಾಡಿದರು.

"ಮಲ್ಲಪ್ಪ— —ಎಲ್ಲ ಪ್ರಯತ್ನಗಳೂ ವಿಫಲವಾದುವು



ಪ್ರೀವ್ಹಿ ಕೌನ್ಸಿಲ್‌ನ ಆಶೆಯಿತ್ತು. ಅದೂ ಕೊನೆಗೆ ಕೈ ಕೊಟ್ಟು. ಈಗ ಒಂದೇ ದಾರಿ.........."

ಮಾತು ತಡೆಯಿತು. ಶಬ್ದಗಳು ಹೊರಡಲಿಲ್ಲ. ಅವರ ಕೈಕಾಲುಗಳು ಚಡಪಡಿಸಿದುವು. ನೀರು ಮಡುಗಟ್ಟಿದ ಕಣ್ಣುಗಳು ಮಲ್ಲಪ್ಪನವರ ಮುಖದಲ್ಲಿ ಕೀಲಿಸಿದುವು.

"ಒಂದೇ ದಾರಿ ? ಯಾವುದು ಒಂದೇ ದಾರಿ ಅಣ್ಣಾ?" ಮಲ್ಲಪ್ಪನವರೇ ಕೇಳಿದರು. ನಿಮಿಷದ ಮೌನದ ನಂತರ ಮಾತು ಹೊರಟಿತು. ಶಂಕರಪ್ಪ ಸಾಹಸಪಟ್ಟು ನುಡಿದರು.

"ದಯೆಯ ಅರ್ಜಿ ಮೇಲೆ ನೀನು ರುಜು ಮಾಡುವುದು ......."

ಅವರ ಮಾತಿನ್ನೂ ಮುಗಿದಿರಲಿಲ್ಲ. ಮಲ್ಲಪ್ಪ ಮತ್ತು ಜಗನ್ನಾಥ ಶಿಂಧೆ ಇಬ್ಬರೂ ತಟ್ಟನೆ ತಮ್ಮ ಮುಖವನ್ನು ತಿರುಗಿಸಿ ನಿಂತರು. ಆದರೂ ಶಂಕರಪ್ಪ ಮಾತು ಮುಂದುವರೆಸಿದರು.

"ನೀವು ಸಹಿ ಮಾಡಿದರೆ ಸಾಕು. ಆ ಅರ್ಜಿಯನ್ನು ಮಹಾರಾಣಿ ಮತ್ತು ವಾಯಿಸರಾಯರ ಕಡೆಗೆ ಕಳಿಸಿ ಕೊಡುತ್ತೇನೆ........ ಮಲ್ಲಪ್ಪ.... ....ಆಗಲ್ಲ ಅನಬ್ಯಾಡೋ.... ...." ಶಂಕರಪ್ಪ ಬಿಕ್ಕಳಿಸಿ ಅತ್ತರು.

"ಅಣ್ಣಾ.... ....ನೀವೆಷ್ಟು ಭೋಳ್ಯಾ ಇದ್ದೀರಿ ? ನಾ ನಿಮ್ಮ ಅಂತಃಕರಣ ಗುರುತಿಸ್ತಿನಿ, ಆದರೆ ನಮ್ಮ ನಾಲ್ಕು ಜನರ ಸಹಿಯ ಮೇಲೆ ಗಲ್ಲು ತಪ್ಪುತ್ತದೇನು ?" ಜಗನ್ನಾಥ ಉತ್ತರಿಸುತ್ತ ಕೇಳಿದ.

"ಜಗನ್ನಾಥ, ನೀವು ಜನರ ಇಚ್ಛೆಗೆ ಮರ್ಯಾದೆ ಕೊಡ್ತೀರಿ

ಅಲ್ಲ ? ನಿಮ್ಮನ್ನು ಪ್ರೀತಿಸುವ ಜನರ ಇಚ್ಛೆಗೆ ಮಾನ ಕೊಡೋದು ಈಗ ನಿಮ್ಮ ಕರ್ತವ್ಯ ಅಲ್ಲೇನು ? ನೀವು ನಿಮ್ಮ ಸಲುವಾಗಿ ಅಲ್ಲದಿದ್ದರೂ ಮುವ್ವತ್ತಮೂರು ಕೋಟಿ ಜನರ ಸಲುವಾಗಿಯಾದ್ರೂ ಈ ಅರ್ಜಿ ಮೇಲೆ ಸಹಿ ಮಾಡಬೇಕಾಗ್ತದ. ಜನರ ಬೇಡಿಕೆಗಿಂತ ಸ್ವತಃ ಆರೋಪಿಯ ಬೇಡಿಕೆಗೆ ಹೆಚ್ಚಿನ ಮಹತ್ವ ಇದ್ದೇ ಇರತದ. ನಿಮ್ಮ ಫಾಸಿ ಶಿಕ್ಷೆ ರದ್ದಾದರೂ ಆಗ್ತದ. ಇಲ್ಲಂತ ಹೇಳಲಿಕ್ಕಾಗ್ತದೇನು ?" "ಅಣ್ಣಾ ........ ಶತ್ರುಗಳಿಗೆ ಶರಣು ಹೋಗೋದಕ್ಕಿಂತ ಮರಣ ಲೇಸು. ಇದು ನಮಗೆ ಅಪಮಾನದ ವಿಷಯ. ಆ ಮುವ್ವತ್ತುಮೂರು ಕೋಟಿ ಜನತೆ ಬೇಡಿಕೊಂಡರೂ ಸರ್ಕಾರ ಮನ್ನಿಸಲಿಲ್ಲವಲ್ಲ ? ನಮಗೆ ಇದರ ನಾಚಿಕೆ ಬೇಡ್ವೆ ?".... ಶಿಂಥೆ ತಟ್ಟನೆ ಕೇಳಿದ.

"ಜಗನ್ನಾಥ, ಮಲ್ಲಪ್ಪಾ ........ ಜನರ ಮರ್ಜಿ ನೀವು ಕಾಯಬೇಕ್ರೆಪಾ.... ... ಅವರ ಇಚ್ಛಾ ಮುರಿಬಾರ್ದು ... ...."

"ನಾವು ಸಾಯಲೇಬೇಕಂತ ಸರ್ಕಾರದ ಇಚ್ಛೆ ಇರೋವಾಗ ನೀವೆಲ್ಲ ಏನು ಮಾಡುವವರು ?"

ಶಿಂಥೆ ನುಡಿದು ಶಂಕರಪ್ಪನ ಬಾಯಿ ಮುಚ್ಚಿಸಿದ. ಮಲ್ಲಪ್ಪ ನಿಧಾನವಾಗಿ ನುಡಿದರು.

"ಜನರ ಇಚ್ಛೆಗೆ, ಅವರ ಸಹಾನುಭೂತಿಗೆ, ಪ್ರೀತಿ-ಗೌರವಗಳಿಗೆ ನಾವು ಎಂದೆಂದಿಗೂ ಋಣಿ ಇದ್ದೇವೆ. ಅಣ್ಣಾ .... .... ಅವರ ಪ್ರೀತಿ ನಮ್ಮ ಮೇಲಿರುವ ವರೆಗೂ ನಮಗೆ ಸಾವಿನಲ್ಲೇ ಸುಖ ಕಾಣ್ತದ."

"ಸಾಯುವ ಸುಖ, ಸುಖದ ಸಾವು, ಈ ಎರಡೂ ಮಾತುಗಳು ಮನುಷ್ಯನ ಜೀವನದಲ್ಲಿ ಅಕಸ್ಮಾತ್ ಬರುತ್ತವೆ. ನಮ್ಮ ಅದೃಷ್ಟದಲ್ಲಿ ಈ ಎರಡೂ ಸುಖ ಬಂದಿವೆ. ಇಂಥ ಸಂಧಿ ಬಿಟ್ಟು ಕೊಡುವದೇ ?" ಜಗನ್ನಾಥ ಮತ್ತೆ ಮಾತೆಳೆದ.



ಶಂಕರಪ್ಪ ಸ್ತಬ್ಧರಾದರು. ಅವರ ಕಣ್ಣುಗಳಿಂದ ಕಂಬನಿಗಳ ಧಾರೆ ತೀವ್ರವಾಯಿತು. ಕೈಯಿಂದ ಹೊಟ್ಟೆ ಒತ್ತಿ ಹಿಡಿದುಕೊಂಡು ಮೇಲೆ ತಲೆಯೆತ್ತಿ 'ಶಿವಶಿವಾ ...........' ಎಂದು ಬಿಕ್ಕಳಿಸಿದಾಗ ಸೆರೆಮನೆಯ ಅಧಿಕಾರಿಯೂ ಕರಗಿ ಹೋದ.

ಕ್ಷಣತುಂಬ ಬರೀ ಮೌನ ಪ್ರಸರಿಸಿತು. ಮರುಕ್ಷಣ ಆ ಮೌನವನ್ನು ಭೇದಿಸುತ್ತ ಮಲ್ಲಪ್ಪ ಮಾತಾಡಿದರು. "ಅಣ್ಣಾ ಹೋಗಲಿ ಬಿಡು ಆ ವಿಷಯ. ಮರಣಕ್ಕೆ ಅಂಜಿ ಶತ್ರುಗಳ ಮುಂದೆ ದಯಾ ಭಿಕ್ಷೆ ಬೇಡಿ ನಾವು ಸಾಧಿಸುವುದಾದರೂ ಏನಿದೆ ? ಫಾಸಿಯ ಶಿಕ್ಷೆ ರದ್ದುಗೊಳಿಸಿ, ದೀರ್ಘಕಾಲದ ಶಿಕ್ಷೆ ಅನುಭವಿಸಿ ಹೊರಬಂದ ಸ್ವಾಭಿಮಾನ ಶೂನ್ಯ ಬದುಕಿಗೆ ಏನು ಅರ್ಥವಿದೆ ? ಇತಿಹಾಸದಲ್ಲಿ ನಮಗಾಗಿ ಮೀಸಲಿರುವ ವೀರಪುಟಗಳನ್ನು ನಾವೇಕೆ ಕಳೆದುಕೊಳ್ಳಬೇಕು ?"

"ಹ್ಯಾಗಿದ್ರು ಸಾಯೋದಿದ್ದೇ ಇದೆ. ನಮಗೆ ಈ ಸ್ವಾರ್ಥವಾದರೂ ದಕ್ಕಲಿ ಅಣ್ಣಾ ........" ನಗುತ್ತ ಜಗನ್ನಾಥ ಮಲ್ಲಪ್ಪನ ಮಾತಿಗೆ ಪುಷ್ಟಿಕೊಟ್ಟನು.

ತನ್ನ ಯಾವ ಮಾತೂ ಅವರಿಗೆ ತಾಕದಿದ್ದಾಗ ಶಂಕರಪ್ಪ ನಿರಾಶರಾದರು. ತಮ್ಮಲ್ಲುಳಿದ ಕೊನೆಯ ಬಾಣವನ್ನು ಎಳೆದು ಬಿಟ್ಟರು.

"ಸ್ವಲ್ಪ ಯೋಚಿಸ್ರಿ ಮಲ್ಲಪ್ಪಾ.......ಜಗನ್ನಾಥ....... ಒಬ್ಬನೇ ಒಬ್ಬ ಸಣ್ಣ ಮಗನ ಸಲುವಾಗಿ...........ಪುಟ್ಟ ಪುಟ್ಟ ಎರಡು ಹೆಣ್ಣುಮಕ್ಕಳ ಸಲುವಾಗಿ .......ತಮ್ಮಂದಿರೇ .......ಇಷ್ಟಾದರೂ ಮಾಡ್ರಿ ......"

ಮಲ್ಲಪ್ಪ, ಜಗನ್ನಾಥರಿಬ್ಬರೂ ನಕ್ಕುಬಿಟ್ಟರು. ಒಂದು ರೀತಿಯ ನಿರ್ಲಿಪ್ತಭಾವ ಬೆರೆತ ನಗೆ ಅದು.

"ಅಣ್ಣಾ.... ...ಇದು ನಿನ್ನ ಕೊನೆ ಅಸ್ತ್ರ ಅಂತ ಕಾಣ್ತದಲ್ಲ ?" ತಟ್ಟನೆ ನಗು ನಿಲ್ಲಿಸಿ ಇಬ್ಬರೂ ಕೇಳಿದರು.

"ಅಣ್ಣಾ ....... ಯಾವ ದೇವರು ಅವರನ್ನು ಜನ್ಮ ಕೊಟ್ಟನೋ ಅವನೇ ಅವರಿಗೆ ಎಲ್ಲ ವ್ಯವಸ್ಥೆ ಮಾಡಿರುತ್ತಾನೆ. ಆ ದೇವರೇ ಅವರ ರಕ್ಷಣೆ ಮಾಡ್ತಾನೆ ಅಣ್ಣಾ— —" ಮಲ್ಲಪ್ಪನವರು ಅಣ್ಣನನ್ನು ಸಂತೈಸುವಿಕೆಯ ದನಿಯಲ್ಲಿ ನುಡಿದರು.

ಶಂಕರಪ್ಪ ಕಣ್ಣೊರೆಸಿಕೊಂಡರು. ಅವರ ಎದೆ ಸೀಳಿಕೊಂಡು ನಿಟ್ಟುಸಿರೊಂದು ಹೊರಹೊಮ್ಮಿತು.

ಭೇಟಿಯ ಸಮಯ ಮುಗಿದ ಸೂಚನೆ ಬಂದಿತು. ಆಕಾಶವೇ ಕಳಚಿ ಮೈಮೇಲೆ ಬಿದ್ದಂತಾಯ್ತು. ಶಂಕರಪ್ಪ ಭೇಟಿಗೆ ಬರುವಾಗ ಎಷ್ಟೆಲ್ಲ ಆಸೆಗಳನ್ನು ಹೊತ್ತು ಬಂದಿದ್ದರು. ಅದೆಲ್ಲ ಪುಡಿಪುಡಿಯಾಯಿತು. ಹಣೆಹಣೆ ಬಡಿದುಕೊಂಡು ತಮ್ಮ ದುರದೃಷ್ಟವನ್ನು ಹಳಿಯುತ್ತ ಶಂಕರಪ್ಪ ಹೊರಬಂದರು.

ಮಾರನೆಯ ದಿನ ಎಲ್ಲ ಪತ್ರಿಕೆಗಳಲ್ಲಿ ಮಲ್ಲಪ್ಪನವರ ಅಭಿಪ್ರಾಯ ಪ್ರಕಟವಾಯಿತು. ಅವರವೇ ಮಾತುಗಳಿವು. "ದಯೆಯ



ಭಿಕ್ಷೆ ಯಾರಲ್ಲಿ ಬೇಡಬೇಕು ? ನಾನು ಬ್ರಿಟಿಷ್ ಸರಕಾರವನ್ನೇ ಮನ್ನಿಸುವುದಿಲ್ಲ. ಯಾಚನೆ ಯಾರ ಮುಂದೆ ? ಏತಕ್ಕಾಗಿ? ನಾನೇನೂ ದೊಡ್ಡ ಮನುಷ್ಯನಲ್ಲ; ಸಾಮಾನ್ಯ. ನನ್ನ ಸಾವಿನಿಂದ ಭಾರತದ ಜನತೆಯಲ್ಲಿ ಸ್ವಾತಂತ್ರ್ಯದ ಬಗೆಗೆ ಜಾಗೃತಿ ಉಂಟಾದರೆ ನನ್ನ ಬದುಕು ಸಾರ್ಥಕವೆಂದು ಭಾವಿಸುತ್ತೇನೆ. ನನ್ನ ಸಾವಿನಿಂದ ಜನರ ರಾಷ್ಟ್ರಾಭಿಮಾನ ಹೆಚ್ಚಿದರೆ ಈ ಸಾವು ಸಾರ್ಥಕ ಎನ್ನುತ್ತೇನೆ. ಇದಕ್ಕಿಂತಲೂ ಹೆಚ್ಚಿನ ಬೆಲೆ ನನ್ನ ಬಾಳಿಗೆ ಬರಬೇಕಾದುದೇನಿದೆ ? ನಾನು ದಯೆಯ ಅರ್ಜಿಯ ಮೇಲೆ ಸಹಿ ಮಾಡುವುದಿಲ್ಲ. ಸಾವಿಗೆ ಹೆದರಿ ಶತ್ರುಗಳಿಗೆ ಶರಣಾಗಿ ಜೀವಭಿಕ್ಷೆ ಬೇಡುವುದು ಅಪಮಾನಕರ."

ಜಗನ್ನಾಥ ಶಿಂಧೆ, ಲಕ್ಷ್ಮೀನಾರಾಯಣ ಸಾರಡಾ ಮತ್ತು ಕುರ್ಬಾನ ಹುಸೇನ್‌ರೂ ಸಹ "ಮಲ್ಲಪ್ಪನವರೊಂದಿಗೆಯೇ ತಮ್ಮ ಸಾವು" ಎಂದು ಸಾರಿ ಸಹಿ ಮಾಡಲಿಲ್ಲ.

## ಕೊನೆಯ ಆಸೆ

ಭಾರತದ ಕ್ರಾಂತಿವೀರ ಮಲ್ಲಪ್ಪ ಧನಶೆಟ್ಟಿಯವರು ಬರೀ ಮಲ್ಲಪ್ಪನವರಲ್ಲ. ಮಲ್ಲರ ಮಲ್ಲ. ಬ್ರಿಟಿಷರಿಗೆ ತಲೆಬಾಗದ ಜಗದೇಕಮಲ್ಲ. "ವಧಾಸ್ತಂಭದ ಹಗ್ಗಕ್ಕೆ ಕೊರಳು ಕೊಡುತ್ತೇನೆಯೇ ವಿನಃ ಬ್ರಿಟಿಷರಿಗೆ ತಲೆ ಬಾಗಿಸುವುದಿಲ್ಲ" ಎಂಬ ಅವರ ಅಂತರ್ಯದ ದೃಢತೆಗೆ ಜನರು ಅತ್ತರು, ಆಶ್ಚರ್ಯ ಪಟ್ಟರು, ಹೆಮ್ಮೆ ಪಟ್ಟರು.

ಈ ನಾಲ್ಕು ಜೀವಗಳನ್ನುಳಿಸುವುದರಲ್ಲಿ ಬಹಳಷ್ಟು ಪರಿಶ್ರಮಿಸಿದವರಲ್ಲಿ ಶ್ರೀ ತಾತ್ಯಾಸಾಹೇಬ ಕೇಳಕರರೂ ಒಬ್ಬರು. ಲಂಡನ್ನಿನ ದುಂಡುಮೇಜಿನ ಪರಿಷತ್ತಿಗೆ ಮಲ್ಲಪ್ಪನವರ ವಿಷಯದ ಅರ್ಜಿಸಲ್ಲಿಸಿದ್ದರು, ವಾಯಿಸರಾಯನಿಗೆ ತಂತಿ ಕಳಿಸಿದ್ದರು, ಭಾರತೀಯ ಆಂದೋಲನಗಳನ್ನು ನಡೆಸಿದ್ದರು. 'ಕೇಸರಿ' ಪತ್ರಿಕೆಗೆ ಪ್ರತಿದಿನ ಸುದ್ದಿ ಕಳಿಸುತ್ತಿದ್ದರು. ಆದರೆ ಅವರ ಭಗೀರಥಪ್ರಯತ್ನ ಫಲ ನೀಡಲಿಲ್ಲ. ತಾತ್ಯಾಸಾಹೇಬರ ಹೃದಯಕ್ಕೆ ಇದೊಂದು ಮರೆಯದ ಆಘಾತವಾಯ್ತು. ಆದರೂ ಚೇತರಿಸಿಕೊಂಡು ಈ ನಾಲ್ಕು ಜನರ ಭೇಟಿಗೆ ಹೊರಟರು. "ಅವರ ಕೊನೆಯ ಆಸೆಯನ್ನಾದರೂ ಅರಿತುಕೊಂಡು ಅದರ ನೆರವೇರುವಿಕೆಗಾಗಿ ಪರಿಶ್ರಮಿಸಿದರೆ ಅವರ ಆತ್ಮಗಳಿಗೆ ಸ್ವಲ್ಪವಾದರೂ ಶಾಂತಿ ದೊರೆತೀತು" ಎಂಬ ಹಂಬಲ ಅವರದು.

ಪುಣೆಗೆ ಬಂದು ಯರವಡಾಜೈಲಾಧಿಕಾರಿಗಳನ್ನು ಕಂಡು ಭೇಟಿಗಾಗಿ ಕೋರಿ ಅರ್ಜಿ ಸಲ್ಲಿಸಿದರು. ಅನುಮತಿ ದೊರೆಯಿತು. ೧೯೩೧ ರ ಜನೇವರಿ ೧೧ ರಂದು ಮಧ್ಯಾಹ್ನ ತಾತ್ಯಾಸಾಹೇಬರು ಶೇಠ ವಾಲಚಂದ ಹೀರಾಚಂದರೊಂದಿಗೆ ಕಾರಾಗೃಹ ಪ್ರವೇಶಿಸಿದರು.

ಜೈಲ ಸುಪರಿಂಟೆಂಡೆಂಟರು ಇವರನ್ನು ಸ್ವಾಗತಿಸಿ ನಾಳೆಯೇ ಆ ನಾಲ್ವರಿಗೂ ಗಲ್ಲಿಗೇರಿಸುವ ವಿಷಯ ತಿಳಿಸಿದರು. ತಾತ್ಯಾಸಾಹೇಬರ ಕಾಲಡಿಯ ನೆಲ ಕುಸಿದಂತಾಗಿ ದೇಹದಾದ್ಯಂತ ಕಂಪನ ಕಾಣಿಸಿತು. ಕಣ್ಣುಗಳಿಂದ ಕಂಬನಿಯು ಧಾರೆ ಉಕ್ಕಿ ಹರಿಯಿತು. ಬಾಯಿಂದ ಮಾತೇ ಹೊರಡಲಿಲ್ಲ. ಗಂಟಲ



ನರವುಬ್ಬಿ ಬಂದು ನಾಲಿಗೆ ಹಿಡಿದು ಎಳೆದಂತಾಯಿತು. ಅವರ ಈ ಅವಸ್ಥೆ ಕಂಡ ಕಾರಾಗೃಹದ ಅಧಿಕಾರಿಯೇ ನುಡಿದರು.

"ಮಲ್ಲಪ್ಪ ಮತ್ತಿತರರ ಕೊನೆಯ ಭೇಟಿಯಾದರೂ ನಿಮಗೆ ಸಿಕ್ಕಿತಲ್ಲ. ಇದೇ ನಿಮ್ಮ ಭಾಗ್ಯವೆಂದು ತಿಳಿಯಿರಿ".

ಸ್ವಲ್ಪ ಹೊತ್ತಿನಲ್ಲಿಯೇ ಅವರು ಮಲ್ಲಪ್ಪ ಧನಶೆಟ್ಟಿ, ಜಗನ್ನಾಥ ಶಿಂಧೆ, ಲಕ್ಷ್ಮೀನಾರಾಯಣ ಸಾರಡಾ ಮತ್ತು ಕುರ್ಬಾನ ಹುಸೇನರ ಮುಂದೆ ನಿಂತಿದ್ದರು. ಆ ನಾಲ್ಕೂ ಜನರು ತಾತ್ಯಾಸಾಹೇಬ ಮತ್ತು ವಾಲಚಂದರರಿಗೆ ಕೈಜೋಡಿಸಿ ನಮಸ್ಕರಿಸಿದರು. ಆ ನಾಲ್ಕು ದುರ್ದೈವೀ ಜೀವಿಗಳನ್ನು ಕಂಡು ತಾತ್ಯಾಸಾಹೇಬನ ಹೃದಯದಲ್ಲಿ ಬೆಂಕಿಯಿಟ್ಟಂತಾಯ್ತು. ಅವರು ಮುಖ ತಗ್ಗಿಸಿ ಕಂಬನಿಯನ್ನೊರಸಿ ಕೊಂಡರು.

"ಮಲ್ಲಪ್ಪಾ.... ....ಶಿಂಧೆ.... ...." ತಾತ್ಯಾಸಾಹೇಬರ ನಾಲಿಗೆಯಿಂದ ಇದಿಷ್ಟೇ ಹೊರಹೊರಟಿತು. ಮುಂದಿನ ಮಾತುಗಳನ್ನು ಬಿಕ್ಕಳಿಕೆ ತಡೆಯಿತು. ಅವರ ಅಂತಃಕರಣಕ್ಕೆ ಮಲ್ಲಪ್ಪನವರು ಕರಗಿಹೋದರು. ಅವರ ಕಣ್ಣುಗಳೂ ನೀರು ತುಂಬಿ ಹೊಳೆದವು.

"ತಾತ್ಯಾಸಾಹೇಬ, ಮನಸ್ಸಿಗೆ ಕೆಟ್ಟ ಅನಿಸಿಕೊಳ್ಳಬ್ಯಾಡ್ರಿ ........ ನಿಮ್ಮ ಕಡೆಯಿಂದ ಸಾಧ್ಯವಾದುದೆಲ್ಲವನ್ನೂ ನೀವು ಮಾಡಿದ್ದೀರಿ. ಶೇಠಜಿಯವರೂ ಬಹಳಷ್ಟು ಪರಿಶ್ರಮ ಪಟ್ಟಿದ್ದಾರೆ. ಇದಕ್ಕಾಗಿ ನಾವು ನಿಮಗೆ ಬಹಳ ಬಹಳ ಕೃತಜ್ಞರಿದ್ದೇವೆ" ಮಲ್ಲಪ್ಪ ನುಡಿದರು. "ಮಲ್ಲಪ್ಪಾ ........ ನಿನ್ನಿಂದ ಕೃತಜ್ಞತೆಗಳನ್ನು ಸ್ವೀಕರಿಸಲು ನಾನು ಬಂದಿಲ್ಲಪ್ಪಾ.......

ಬದಲಾಗಿ ನಿಮ್ಮ ಕ್ಷಮೆ ಕೇಳಲು ಬಂದಿದ್ದೇವೆ" ತಾತ್ಯಾಸಾಹೇಬರು ಗದ್ಗದಿಸುತ್ತಲೇ ಹೇಳಿದರು.

"ಛೀ ಛೀ, ತಾತ್ಯಾಸಾಹೇಬ, ನಾವೇ ನಿಮ್ಮ ಬಳಿ ಕ್ಷಮೆ ಕೇಳಬೇಕು. ನಮ್ಮ ದುರ್ದೈವ. ನಿಮ್ಮಂತಹವರ ಜೊತೆ ಬಹಳ ದಿನ......"

ಜಗನ್ನಾಥನ ಮಾತು ಮುಗಿದಿರಲಿಲ್ಲ. ತಾತ್ಯಾಸಾಹೇಬ ನುಡಿದರು.

"ನಾನು ದುರ್ದೈವಿ ಜಗನ್ನಾಥ........ದುರ್ದೈವಿ ನಾನು. ನನ್ನಿಂದ ನಿಮ್ಮನ್ನುಳಿಸಿ ಕೊಳ್ಳಲಾಗಲಿಲ್ಲವಲ್ಲ. ಜಗನ್ನಾಥ.... ....ಎಷ್ಟು ಅಸಮರ್ಥ ನಾನು.... ...." ತಾತ್ಯಾಸಾಹೇಬ ಚಡಪಡಿಸಿದರು.

"ಹೀಂಗ್ಯಾಕ ವಿಚಾರ ಮಾಡ್ತೀರಿ ತಾತ್ಯಾಸಾಹೇಬ ? ಇದೆಲ್ಲ ಅದೃಷ್ಟದ ಆಟ. ಭಾರತದ ಮೂವತ್ತುಮೂರು ಕೋಟಿ ಜನತೆಗೆ ಯಶಸ್ಸು ಸಿಗಲಿಲ್ಲ ಅಂದ ಮೇಲೆ ಅದರಲ್ಲಿ ನಿಮ್ಮದೇನು ದೋಷ ?"

ಜಗನ್ನಾಥ ಸಮಾಧಾನದಿಂದಲೇ ನುಡಿದ.

ತಾತ್ಯಾಸಾಹೇಬರು ಕಣ್ಣೊರೆಸಿಕೊಂಡರು. ತುಟಿ ಕಚ್ಚಿ ಹಿಡಿದು ಸಂಯಮ ಸಾಧಿಸಿದರು. ನಂತರ ನಿಧಾನವಾಗಿ ಕೇಳಿದರು.

"ಹೋಗಲಿ ಬಿಡ್ರಿ.......ಎಂಥ ಸಮಯ ಇದು......." ಮಾತು ಮುಗಿಯಲಿಲ್ಲ. ಎದೆ ಒತ್ತಿ ಹಿಡಿದು ಕ್ಷಣ ಹೊತ್ತು ಸುಮ್ಮನಿದ್ದು ಮತ್ತೆ ಮಾತು ಮುಂದುವರಿಸಿದರು.



"ಈಗ ನಿಮ್ಮ ಕೊನೆಯ ಆಶೆ.... ...." ಈ ವಾಕ್ಯ ಹೊರಬೀಳಬೇಕಾದರೆ ತಾತ್ಯಾಸಾಹೇಬರ ಹೃದಯದಲ್ಲಿ ಯಾತನೆಯ ಮಹಾಪೂರ.

"ಕೊನೆಯ ಆಶೆ ? ನಾಳೆಯೇ ನಮ್ಮನ್ನು ಗಲ್ಲಿಗೇರಿಸುವವರಿದ್ದಾರೆ. ಇವತ್ತು ನಮ್ಮ ಕೊನೆಯ ಆಶೆ ?" ಮಲ್ಲಪ್ಪ ತಮ್ಮ ಬಾಯಿಂದಲೇ ತಮ್ಮ ಗಲ್ಲಿನ ವಿಷಯ ಅರುಹಿದರು. ತಾತ್ಯಾಸಾಹೇಬರು ನಿಡಿದಾದ ಉಸಿರೆಳೆದರು. ತಾವೇ ಹೇಳಬೇಕಾಗಿ ಬಂದಿದ್ದ ಅಸಹ್ಯ ವಿಷಯವನ್ನು ಮಲ್ಲಪ್ಪನವರೇ ತಿಳಿಸಿದ್ದುದು ಅವರ ಎದೆ ಭಾರವನ್ನು ತಗ್ಗಿಸಿತ್ತು.

"ನಮ್ಮ ಕೊನೆಯ ಬಯಕೆಯನ್ನು ಸರ್ಕಾರ ನಡೆಸಿಕೊಡುತ್ತದೆ ಎಂದೆನಿಸುತ್ತದೆಯೇ ನಿಮಗೆ ?" ಮಲ್ಲಪ್ಪ ಕೇಳಿದರು.

"ನಮಗಂತೂ ಇದೆಲ್ಲ ವ್ಯರ್ಥವೆಂದು ತೋರುತ್ತದೆ. ಆದರೂ ನೀವು ಕೇಳುತ್ತಿರುವಿರಿ ಎಂದು ಹೇಳಬೇಕಾಗಿದೆ. ತಾತ್ಯಾಸಾಹೇಬ ನಾವು ನಮ್ಮ ಕಣ್ಣು ಮುಚ್ಚುವ ಮುನ್ನ ಮಹಾತ್ಮಾ ಗಾಂಧೀಜಿಯವರನ್ನೊಮ್ಮೆ ನೋಡುವ ಹಾಗಿದ್ದರೆ........ಇದೇ ನಮ್ಮ ಕೊನೆಯ ಆಸೆ" ಜಗನ್ನಾಥ ಎಲ್ಲಿಯೋ ನೋಡುತ್ತ ನುಡಿದ.

"ನಾಳೆ ನಮ್ಮನ್ನು ಗಲ್ಲಿಗೇರಿಸಿದ ನಂತರ ನಮ್ಮ ಶವಗಳನ್ನು ನಿಮ್ಮ ವಶಕ್ಕೆ ತೆಗೆದುಕೊಂಡು ನೀವೇ ನಮ್ಮ ಅಂತಿಮ ಸಂಸ್ಕಾರ ಮಾಡಲು ಪ್ರಯತ್ನ ಮಾಡಬೇಕು" ಮಲ್ಲಪ್ಪ ಹೇಳಿದರು.

ಇಷ್ಟು ಹೊತ್ತು ಎಲ್ಲರ ಮಾತುಗಳನ್ನು ಕೇಳುತ್ತ ಮೌನವಾಗಿ ನಿಂತಿದ್ದ ಕುರ್ಬಾನ ಹುಸೇನ ತಟ್ಟನೆ ನುಡಿದರು.

"ಹೋಗಲಿ ಬಿಡ್ರೀ........ಸತ್ತ ಮೇಲೆ ಪ್ರಪಂಚ ಮುಳುಗಿತು. ಈ ಸಣ್ಣ ವಿಷಯಕ್ಕಾಗಿ ತಾತ್ಯಾಸಾಹೇಬರಿಗೇಕೆ ತೊಂದರೆ ಕೊಡುವಿರಿ ? ತಾತ್ಯಾಸಾಹೇಬ, ಈ ಬ್ರಿಟಿಷ್ ಸರ್ಕಾರ ಬಹಳ ನಿರ್ದಯ ಅದರಿ. ಇದು ನಿಮ್ಮ ಯಾವ ಬೇಡಿಕೆಯನೂ ಮಂಜೂರು ಮಾಡುವುದಿಲ್ಲ. ಸುಮ್ಮ ಸುಮ್ಮನೆ ನಿಮ್ಮ ಅವಮಾನ........".

"ಎಂಥ ಅವಮಾನ ! ನಿಮ್ಮ ಆಸೆ ಪೂರ್ಣವಾಗುವ ಹಾಗಿದ್ದರೆ ನನ್ನ ಅಪಮಾನವಾಗಲಿ ಬಿಡಿ, ನಾನು ಅದನ್ನು ಸಹಿಸುತ್ತೇನೆ ಕುರ್ಬಾನ ಹುಸೇನ್. ಹೂಂ ಗಾಂಧೀಜಿಯ ದರ್ಶನ ಒಂದುವೇಳೆ ಸಿಕ್ಕರೂ ಸಿಗಬಹುದು. ಆದರೆ......" ತಾತ್ಯಾಸಾಹೇಬರು ಸಂಶಯದ ದನಿ ಹೊರಡಿಸಿದರು.

"ನಮ್ಮ ಶವ ಸಂಸ್ಕಾರದ ಪ್ರಶ್ನೆ ತಾನೆ ? ಹೋಗಲಿ, ಬಿಟ್ಟು ಬಿಡಿ." ಮಲ್ಲಪ್ಪ ನಿರ್ಧಾರದ ದನಿಯಲ್ಲಿ ಹೇಳಿಬಿಟ್ಟರು.

"ಪ್ರಯತ್ನ ಮಾಡ್ತೇವೆ ಮಲ್ಲಪ್ಪಾ ........ ಪ್ರಯತ್ನ ಮಾಡುವುದಿಷ್ಟೇ ನಮ್ಮ ಕೈಯಲ್ಲಿರೋದು. ಪ್ರತಿಫಲ ಕೊಡೋದು ಬಿಡೋದು ಎಲ್ಲ ಆ ಕಟುಕ ಸರ್ಕಾರವೇ ಅಲ್ಲವೆ? ಸಮಯವು ಬಹಳ ಕಡಿಮೆ ಇದೆ."

"ಸಹಜ ಸಾಧ್ಯವಾದರೆ ಮಾತ್ರ ನೋಡ್ರಿ. ಅದರ ಸಲುವಾಗಿ ಹೆಚ್ಚಿನ ಕಷ್ಟ ವಹಿಸುವ ಅವಶ್ಯಕತೆಯಿಲ್ಲ." ಜಗನ್ನಾಥ ಹೇಳಿದ.



"ಎರಡೂ ವಿಷಯಗಳಿಗಾಗಿ ಪ್ರಯತ್ನ ಮಾಡ್ತೇವೆ ಮಲ್ಲಪ್ಪಾ. ಎರಡೂ ಸಾಧಿಸಿದರೆ ಒಳ್ಳೆಯದೇ. ಇಲ್ಲದಿದ್ದರೆ ಗಾಂಧೀಜಿಯ ಭೇಟಿಯಾದರೂ.... ...." ತಾತ್ಯಾಸಾಹೇಬರು ಪ್ರಯತ್ನದ ಆಶ್ವಾಸನೆಯಿತ್ತರು.

"ನೋಡ್ರೀ........ಸಾಧ್ಯವಾದರೆ........" ಮಲ್ಲಪ್ಪ ನಿಧಾನವಾಗಿ ನುಡಿದರು. ಅವರೆದ್ದು ಹೊರಬರುವಾಗ ಜಗನ್ನಾಥ ಶಿಂಧೆಯ ನಗುಮಿಶ್ರಿತ ಸ್ವರ ಹರಿದುಬಂದಿತು. "ಇದೇ ನಮ್ಮ ಕೊನೆಯ ಭೇಟಿ ತಾತ್ಯಾಸಾಹೇಬ........ಸರಿ........ಸರಿ........!"

ಎಲ್ಲರ ಮೈಮೇಲೆ ಈ ಮಾತು ಮುಳ್ಳೆಬ್ಬಿಸಿತು. ತಾತ್ಯಾಸಾಹೇಬರಿಗೆ ನಮುಸ್ಕರಿಸಿ ಅವರು ಮೌನವಾದರು.

ತಾತ್ಯಾಸಾಹೇಬ ಮತ್ತು ವಾಲಚಂದರ ಹೆಜ್ಜೆಗಳು ಯಾಂತ್ರಿಕವಾಗಿ ಬಾಗಿಲ ಕಡೆಗೆ ಹೊರಳಿದುವು.

ಅವರು ಹೊರಬಂದಾಗ ಮಲ್ಲಪ್ಪ ಧನಶೆಟ್ಟಿಯವರ ಅಣ್ಣ ಶಂಕರಪ್ಪ ಧನಶೆಟ್ಟಿ ನಿಂತಿದ್ದರು. ಹತ್ತಿರ ಬಂದು ಹೇಳಿದರು.

"ಮನೆಯವರೆಲ್ಲ ಬಂದಿದ್ದಾರೆ, ಮಲ್ಲಪ್ಪನ ಕೊನೆಯ ಭೇಟಿಗೆ" ಇಷ್ಟು ಹೇಳಬೇಕಾದರೆ ಅವರು ಗಳಗಳನೆ ಅತ್ತುಬಿಟ್ಟರು.

ತಾತ್ಯಾಸಾಹೇಬ ಅವರ ಬೆನ್ನು ತಟ್ಟುತ್ತ ಮರು ನುಡಿದರು.

"ಹೂಂ.... ....ಶಂಕರಪ್ಪ ಅವರ ಕೊನೆಯ ಆಸೆಯನ್ನು ಈಡೇರಿಸಲು ನಾನು ಪ್ರಯತ್ನಿಸುತ್ತೇನೆ. ಸಮಯ ಬಹಳ ಕಡಿಮೆ ಇದೆ. ಆದರೂ ಪ್ರಯತ್ನ ಮಾಡುವೆ."

ತಾತ್ಯಾಸಾಹೇಬ 'ಕೇಸರಿ' ಪತ್ರಿಕೆಯ ಕಾರ್ಯಾಲಯಕ್ಕೆ

ಬಂದು ತಕ್ಷಣ ಸೇಠ ವಾಲಚಂದರನ್ನು ಬೊಂಬಾಯಿಯ ಗೃಹ ಮಂತ್ರಿ ನಾ. ಹಾಟ್‌ಸನ್ ಅವರಲ್ಲಿಗೆ ಕಳಿಸಿದರು. ಅದರೆ ಸೇಠಜಿ ಹೋದ ನಂತರ ತಾತ್ಯಾಸಾಹೇಬರಿಗೆ ತಿಳಿದ ಸುದ್ದಿ-ಗೃಹಮಂತ್ರಿ ಇಂದು ಪುಣೆಯಲ್ಲಿಯೇ ಇದ್ದಾರೆಂಬುದು. ತಕ್ಷಣ ಅವರು ಗೃಹಮಂತ್ರಿಗೆ ಫೋನ್ ಮಾಡಿದರು.

"ನಿಮ್ಮನ್ನು ಅರ್ಜಂಟಾಗಿ ಭೇಟಿಯಾಗಬೇಕಾಗಿದೆ. ದಯವಿಟ್ಟು ಸಮಯ ತಿಳಿಸಿ ಅನುಮತಿ ಕೋಡಬೇಕು."

ಇವರ ಪ್ರಾರ್ಥನೆಯನ್ನು ಮನ್ನಿಸಿ ಹಾಟ್‌ಸನ್‌ರು ತಮ್ಮನ್ನು ಬಂದು ಕಾಣಲು ಒಪ್ಪಿಗೆ ನೀಡಿದರು. ತಾತ್ಯಾಸಾಹೇಬ ತಡಮಾಡದೆ ಸರ್ಕಾರಿ ಬಂಗಲೆಗೆ ಬಂದರು.

ತಾತ್ಯಾಸಾಹೇಬ ಮತ್ತು ಹಾಟ್‌ಸನ್‌ರ ಭೇಟಿ ಸುಮಾರು ಇಪ್ಪತ್ತು ನಿಮಿಷಗಳವರೆಗೂ ನಡೆಯಿತು. ತಾತ್ಯಾಸಾಹೇಬ ಆ ನಾಲ್ಕು ದುರ್ದೈವಿಗಳ ಕೊನೆಯ ಬಯಕೆಯನ್ನು ಗೃಹಮಂತ್ರಿಗೆ ತಿಳಿಸಿದರು. ನಾಳೆ ಅವರನ್ನು ಗಲ್ಲಿಗೇರಿಸಿದ:ನಂತರ ಅವರ ಶವಗಳನ್ನು ತಮಗೆ ಕೊಡಬೇಕೆಂದೂ ಅವರವರ ಧರ್ಮಾನುಸಾರ ಅವರ ಅಂತ್ಯಸಂಸ್ಕಾರ ಮಾಡುತ್ತೇವೆಂದೂ ಕಳಕಳಿಯಿಂದ ಕೇಳಿಕೊಂಡರು. ಆದರೆ ಅದೆಲ್ಲ ನಿಷ್ಫಲವಾಯಿತು. ತಮ್ಮ ನಿರಾಕರಣೆಗೆ ಕಾರಣವನ್ನೂ ಸಹ ಅವರು ಸ್ಪಷ್ಟಪಡಿಸಿದರು.

"ನೋಡಿ ತಾತ್ಯಾಸಾಹೇಬ, ಶವಗಳನ್ನು ನಿಮ್ಮ ವಶದಲ್ಲಿ ಕೊಡುವುದು ಖಂಡಿತ ಸಾಧ್ಯವಿಲ್ಲ. ಕೊಟ್ಟರೆ ಜನರು ಅವುಗಳ ಮೆರವಣಿಗೆಗಾಗಿ ಆಗ್ರಹ ಪಡಿಸುತ್ತಾರೆ. ಮೆರವಣಿಗೆ ಹೊರಡಿಸಿದರೆ ಜನರು ಉದ್ರೇಕಗೊಳ್ಳುವುದು ಸಹಜ. ಉದ್ರೇಕ



ಗೊಂಡಾಗ ಜಗಳ, ದಂಗೆಗಳು ಉದ್ಭವಿಸುತ್ತವೆ. ಮೆರವಣಿಗೆ ತೆಗೆಯುವುದಿಲ್ಲ ಎಂದು ನೀವು ಎಷ್ಟೇ ಹಟ ಹಿಡಿದರೂ ಸಹಸ್ರ ಸಹಸ್ರ ಜನಸಮೂಹದ ಮುಂದೆ ತಲೆಬಾಗಲೇಬೇಕಾಗುತ್ತದೆ. ಪೋಲಿಸರ ಲಾಠಿ, ಗುಂಡು, ಇದೆಲ್ಲ ಗಲಾಟೆ ಬೇಡ. ಇಷ್ಟೆಲ್ಲ ನಡೆದ ಮೇಲೆ ನೀವು ಏನೂ ಮಾಡುವ ಹಾಗಿಲ್ಲ. ಹಾಂ.... ....ನಿಮಗೆ ಒಂದು ಭರವಸೆ ಕೊಡುತ್ತೇನೆ. ಆ ನಾಲ್ಕು ಶವಗಳ ಅಂತ್ಯಸಂಸ್ಕಾರಗಳನ್ನು ಅವರವರ ಜಾತಿಗನುಗುಣವಾಗಿಯೇ ಕಾರಾಗೃಹದಲ್ಲಿ ನಡೆಯಿಸಲಾಗುವುದು. ಸರ್ಕಾರವೇ ಅದಕ್ಕೆಲ್ಲ ಹೊಣೆಯಾಗಿ ನಿಂತು ನಿರ್ವಹಿಸುವಂತೆ ನೋಡಿಕೊಳ್ಳುವ ಜವಾಬ್ದಾರಿ ನನ್ನದು.

ಇನ್ನು ಮಹಾತ್ಮಾ ಗಾಂಧೀಜಿಯವರ ಭೇಟಿಯ ವಿಷಯ. ಸರ್ಕಾರ ಈ ವಿಷಯದಲ್ಲಿ ತನ್ನದೇ ವಿಶಿಷ್ಟ ರೀತಿಯನ್ನಿಟ್ಟುಕೊಂಡಿದೆ. ಗಾಂಧೀಜಿಯವರ ಭೇಟಿಯೂ ಮಲ್ಲಪ್ಪ ಧನಶೆಟ್ಟಿ ಮತ್ತಿತರಿಗೆ ಆಗುವುದು ಅಸಾಧ್ಯ," ಎಂದು ಹಾಟಸನ್ ಗಟ್ಟಿಯಾಗಿ ಹೇಳಿದರು.

ತಾತ್ಯಾಸಾಹೇಬರು ಕೈ-ಕೈ ಹಿಸುಕಿಕೊಳ್ಳುತ್ತ ಗೃಹ ಮಂತ್ರಿಯ ಅಪ್ಪಣೆ ಪಡೆದು ಹೊರಬಂದರು. ಅವರನ್ನು ಕಳಿಸಲು ಹಿಂದೆ ಬಂದ ಹಾಟ್‌ಸನ್ ಅವರು ಗಂಭೀರವಾಗಿ ನುಡಿದರು.

"I am going to finish all this botheration once for all".

ಅಲ್ಲಿಂದ ಹೊರಬಿದ್ದ ತಾತ್ಯಾಸಾಹೇಬರು ವಿಳಂಬ ಮಾಡದೆ ವಾಯಿಸ್‌ರಾಯ್ ಲಾರ್ಡ್ ಐರ್ವಿನ್‌ರಿಗೆ ತಂತಿ ಕಳಿಸಿದರು.

ಈ ನಾಲ್ಕು ಜನರಿಗೂ ಮಹಾತ್ಮಾ ಗಾಂಧೀಜಿಯವರ ಭೇಟಿ ಮಾಡಿಸಬೇಕೆಂದು ಕೋರಿದರು. ಅವರ ಶವಗಳನ್ನು ಸಂಸ್ಕಾರಕ್ಕಾಗಿ ತಮ್ಮ ವಶಕ್ಕೆ ಕೊಡಬೇಕೆಂಬುದನ್ನೂ ಸೇರಿಸಿದರು.

ಆದರೆ ಆ ತಂತಿಗೆ ಉತ್ತರ ಸಮಯದೊಳಗಾಗಿ ಬರಲಿಲ್ಲ. ಅನಂತರವೂ ಬರಲಿಲ್ಲ.

## ಕೊನೆಯ ಭೇಟಿ

"ತಕ್ಷಣ ಬಂದು ಭೇಟಿಯಾಗಿರಿ. ತಡಮಾಡಿದರೆ ಮುಂದೆಂದೂ ಭೇಟಿಯಾಗುವುದು ಸಾಧ್ಯವಿಲ್ಲ" ಎಂಬ ಸಂದೇಶ ಹೊತ್ತ ತಂತಿಗಳು ಮಲ್ಲಪ್ಪ ಧನಶೆಟ್ಟಿ, ಜಗನ್ನಾಥ ಶಿಂಧೆ, ಲಕ್ಷ್ಮೀನಾರಾಯಣ ಸಾರಡಾ ಮತ್ತು ಕುರ್ಬಾನ ಹುಸೇನರ ಮನೆಗಳಿಗೆ ಬಂದು ತಲುಪಿದವು.

ಆಕಸ್ಮಿಕವಾಗಿ ಬರಸಿಡಿಲಿನಂತೆ ಬಂದೆರಗಿದ ತಂತಿಗಳನ್ನು ಕಂಡು ಮನೆಯವರು ಕಂಗಾಲಾದರು. ಎಲ್ಲರ ಮೇಲೆ ವಜ್ರಾಘಾತವಾಯಿತು. ಜನರ ಎಲ್ಲ ಆಸೆ, ಪ್ರಯತ್ನ, ಕಷ್ಟಗಳ ಮೇಲೆ ಕೊನೆಯ ವಜ್ರಾಘಾತ !

ಈ ನಾಲ್ವರ ಮನೆಗಳಲ್ಲಿ ಗೋಳಾಟವೇ ಗೋಳಾಟ. ಎಲ್ಲರ ರೋದನಸ್ವರ ತಾರಕಕ್ಕೇರಿತು. ಕಂಬನಿಗಳ ಧಾರೆ ಪ್ರವಹಿಸಿತು. ಎಲ್ಲರೆದೆಗಳಲ್ಲಿ ಸಂಕಟ ತಾನೇ ತಾನಾಯಿತು.

ಮಲ್ಲಪ್ಪ ಧನಶೆಟ್ಟಿಯವರ ಎಲ್ಲ ಗೆಳೆಯರು ಬಂದು ಸೇರಿದರು. ಸುದ್ದಿ ಕಾಳ್ಗಿಚ್ಚಿನಂತೆ ಸೊಲ್ಲಾಪುರದ ತುಂಬ ಹಬ್ಬಿತು.



ಬಂಧು ಬಳಗದವರು ಓಡಿ ಬಂದರು. ಎಲ್ಲರೂ ಮಲ್ಲಪ್ಪನವರ ಕೊನೆಯ ದರ್ಶನಕ್ಕಾಗಿ ಕಾತರಿಸಿ ನಿಂತರು.

ಅದೇ ದಿನ ರಾತ್ರಿ ಬಹಳಷ್ಟು ಜನರು ಪುಣೆಗೆ ರೈಲು ಹತ್ತಿದರು. ಉಳಿದವರು ಶನಿವಾರ ದಿನಾಂಕ ೧೦ ರಂದು ೨ ಕಾರು ಟ್ರಕ್ಕುಗಳಲ್ಲಿ ನಿಂತು ಯರವಡಾದ ದಾರಿ ಹಿಡಿದರು. ಆ ಟ್ರಕ್ಕುಗಳಲ್ಲಿ ಮಲ್ಲಪ್ಪನವರ ೬೦-೭೦ ವರ್ಷದ ವೃದ್ಧ ತಂದೆ ರೇವಣಸಿದ್ದಪ್ಪ ಧನಶೆಟ್ಟಿ, ಅಣ್ಣ ಶಂಕರಪ್ಪ ಧನಶೆಟ್ಟಿ, ತಂಗಿ ಈರವ್ವ, ಚೆನ್ನವ್ವ ಮೊದಲಾದವರು ಕುಸಿದು ಕುಳಿತಿದ್ದರು. ಮಲ್ಲಪ್ಪನವರ ಒಬ್ಬನೇ ಒಬ್ಬ ಮಗ ಮತ್ತು ಮಡದಿ ಅರೆಹುಚ್ಚರಾಗಿದ್ದರು.

ಜನೆವರಿ ೧೧ ರವಿವಾರ ಮಧ್ಯಾಹ್ನ ೩ ಗಂಟೆಗೆ ಭೇಟಿಯ ಸಮಯ. ಯರವಡಾ ಜೈಲಿನ ಮುಂದೆ ಜನರು ಕಿಕ್ಕಿರಿದು ನೆರೆದರು. ಅದೇ ಸಮಯಕ್ಕೆ ಸರಿಯಾಗಿ ಜಗನ್ನಾಥ ಶಿಂಧೆಯ ತಾಯಿ-ತಂದೆ, ಬಂಧು-ಬಳಗ, ಮಿತ್ರಸಮೂಹವೆಲ್ಲ ಬಂದು ಸೇರಿತು. ಸಾರಡಾ ಅವರ ಕುಟುಂಬದ ಎಲ್ಲ ಸದಸ್ಯರೂ ಮಿತ್ರರೂ ಕಂಗಾಲಾಗಿ ಬಂದು ಒಂದುಗೂಡಿದರು. ಕುರ್ಬಾನ ಹುಸೇನರ ಮನೆಯವರೂ, ಬಂಧುಗಳೂ ಬಂದು ನೆರೆದರು. ಯರವಡಾ ಜೈಲಿನ ಮುಂದಿನ ವಿಶಾಲ ಅಂಗಳ ಈ ನಾಲ್ಕು ಜನ ಕ್ರಾಂತಿವೀರರ ಸಂಬಂಧಿಕರಿಂದ ತುಂಬಿ ಹೋಯಿತು. ನಿಟ್ಟುಸಿರು, ಕಣ್ಣೀರು, ನರಳುವಿಕೆ, ಅಸ್ಪಷ್ಟ ರೋದನಸ್ವರಗಳಿಂದ ವಾತಾವರಣ ತತ್ತರಿಸಿತು. ಒಬ್ಬರ ಮುಖದ ಮೇಲೂ ಆಸೆಯಿಲ್ಲ. ಒಬ್ಬರ ಕಂಗಳಲ್ಲಿಯೂ ಹೊಳಪಿಲ್ಲ. ಆಡಲಾಗದ ಅನುಭವಿಸಲಾಗದ ವೇದನೆಯ ವರ್ತುಳದಲ್ಲಿ ಅವರೆಲ್ಲ ಬಂಧಿತ

ರಾಗಿದ್ದರು. ಜನರ ಗುಂಪಲ್ಲ ಅದು. ಯಾತನಾಶಿಬಿರ ಅದು !

ಮೂರುಗಂಟೆಗೆ ಹೇಳಿದ್ದು ಸಂಜೆ ಐದು ಗಂಟೆಯಾದರೂ ಭೇಟಿಗಾಗಿ ಕರೆ ಬರಲಿಲ. ಕೊನೆಗೆ ಐದೂ ಕಾಲು ಸುಮಾರಿಗೆ ಇವರನ್ನು ಒಳಗೆ ಪ್ರವೇಶಿಸಲು ಸೂಚನೆ ನೀಡಿದರು.

ಯರವಡಾ ಕಾರಾಗೃಹದ ದಿಂಡಿ ಬಾಗಲಿನಿಂದ ಒಳಪ್ರವೇಶಿಸಿದ ನಂತರ ಪಕ್ಕದ ಭಾಗದಲ್ಲಿ ಭೇಟಿಯ ವ್ಯವಸ್ಥೆ ಮಾಡಲಾಗಿತ್ತು. ಕೋಣೆಯ ಎರಡೂ ಬದಿಗೆ ಸಣ್ಣ ಕೋಣೆಗಳಿದ್ದುವು. ನಡುವೆ ಪಡಶಾಲೆಯಂತಹ ಖಾಲಿ ಜಾಗವಿತ್ತು. ಒಂದು ಕೋಣೆಯಲ್ಲಿ ಮಲ್ಲಪ್ಪ ಧನಶೆಟ್ಟಿ ಮತ್ತು ಸಾರಡಾ, ಇನ್ನೊಂದು ಕೋಣೆಯಲ್ಲಿ ಜಗನ್ನಾಥ ಶಿಂಧೆ ಮತ್ತು ಕುರ್ಬಾನ ಹುಸೇನರನ್ನು ಬಂಧಿಸಿಟ್ಟಿದ್ದರು. ಅವರ ಕೈ ಕಾಲುಗಳನ್ನು ಕಬ್ಬಿಣದ ಬಳೆ–ಸರಪಳಿಗಳಿಂದ ಬಿಗಿದಿದ್ದರು. ಮೈಮೇಲೆ ಕೈದಿ ಬಟ್ಟೆಗಳು. ಮೊದಲು ಮಲ್ಲಪ್ಪ ಧನಶೆಟ್ಟಿಯವರ ದರ್ಶನ. ಶಂಕರಪ್ಪ ಧನಶೆಟ್ಟಿ ಮೊದಲು ಎದ್ದು ಬಂದರು. ತಮ್ಮನನ್ನು ಕಂಡು ಅವನ ಭೇಟಿಗಾಗಿ ಎಲ್ಲರೂ ಬಂದಿರುವುದಾಗಿ ತಿಳಿಸಿದರು.

ಮಲ್ಲಪ್ಪನವರು ಮಾತಾಡಿದರು. "ನಾಳೆಯೇ ನಮ್ಮನ್ನು ಗಲ್ಲಿಗೇರಿಸುವವರಿದ್ದಾರೆ. ಇಂಥ ಸಮಯದಲ್ಲಿ ಎಲ್ಲರನ್ನೂ ನನ್ನ ಭೇಟಿಗೆ ಕರೆದುಕೊಂಡು ಬಂದಿದ್ದೀಯಲ್ಲಣ್ಣಾ...... ನಮ್ಮ ಹೃದಯಗಳ ಮೇಲೆ ಇದೆಂಥಾ ವಜ್ರಾಘಾತ ! ಅಣ್ಣಾ.... .... ಮನುಷ್ಯನ ಮರಣದ ದುಃಖ ಸಹಿಸಬಹುದು. ಆದರೆ ಮರಣದ ಸಮಯದಲ್ಲಿ ಪತ್ನಿ–ಪುತ್ರರ ಮೋಹದ ದುಃಖ ಸಹಿಸುವುದು



ಸಾಧ್ಯವಿಲ್ಲಣ್ಣಾ........ದಯವಿಟ್ಟು ಅವರಾರನ್ನೂ ನನ್ನ ಮುಂದೆ ಕರೆದು ತರಬೇಡ. ಇಲ್ಲಿಂದಲೇ ಅವರೆಲ್ಲರಿಗೆ ನನ್ನ ಶರಣಾರ್ಥಿ ಹೇಳಣ್ಣಾ ........"

ವಜ್ರದೆದೆಯ ಮಲ್ಲಪ್ಪಾ ಈಗ ಬೆಣ್ಣೆಯಂತೆ ಮೆತ್ತಗಾದರು. ಸಾವಿಗಂಜದ ಧೀರ ಈಗ ಸಂಬಂಧಿಕರ ಭೇಟಿಗೆ ಹೆದರಿದರು.

"ಇದೆಲ್ಲ ಹ್ಯಾಂಗ ಸಾಧ್ಯ ಮಲ್ಲಪ್ಪಾ ?" ಕಣ್ಣುಗಳಿಂದ ಪ್ರವಹಿಸುತ್ತಿದ್ದ ಕಂಬನಿಯ ಧಾರೆಯನ್ನು ಧೋತರದ ಸೆರಗಿನಿಂದ ಒರೆಸಿಕೊಳ್ಳುತ್ತ ಶಂಕರಪ್ಪ ಅತ್ಯಂತ ಪ್ರಯಾಸಪಟ್ಟು ಕೇಳಿದರು.

"ದೊಡ್ಡ ಆಸೆಯಿಟ್ಟುಕೊಂಡು ಎಲ್ಲರೂ ಬಂದಾರ. ಅವರಿಗೀಗ ಭೇಟಿ ಕೊಡಾಂಗಿಲ್ಲ ಅಂದ್ರ ಅವರು ಹ್ಯಾಂಗ ಕೇಳತಾರ ತಮ್ಮಾ ? ನೂರಾರು ಜನರು ನಿನ್ನ ಭೇಟಿಗಾಗಿ ಬಂದಿದ್ದಾರೆ. ಅವರಿಗೆ ಈಗ ನಾ ರಂಜ ಮಾಡಬೇಕೇನು ? ಇದು ಎಲ್ಲೋರಿಗೂ ನಿನ್ನ ಕಡೀ ಭೇಟಿ ಅದ ತಮ್ಮಾ.... ....ಒಂದು ಸಾರಿ ಎಲ್ಲಾರೂ ನಿನ್ನ ಮುಖ ನೋಡತಾರಪ್ಪಾ.... ....ಬ್ಯಾಡ ಅನಬಾರ್ದು."

ಎನ್ನುತ್ತ ಶಂಕರಪ್ಪ ಬಹಳಷ್ಟು ತಿಳಿಯಹೇಳಿದಾಗ ಅನಿವಾರ್ಯವಾಗಿ ಮಲ್ಲಪ್ಪನವರು ಒಪ್ಪಿಕೊಂಡರು. ಶಂಕರಪ್ಪ ಹೊರಗೆ ಬಂದರು. ಎದ್ದು ನಿಂತವರಿಗೆಲ್ಲ ಎಚ್ಚರಿಕೆ ಕೊಟ್ಟರು.

"ಭೇಟಿ ವೇಳೆಯಲ್ಲಿ ಯಾರೂ ಅವನ ಮುಂದೆ ಅಳಬಾರದು, ಚೀರಬಾರದು, ಕಣ್ಣಲ್ಲಿ ನೀರು ತರಬಾರದು, ಚಡ

ಪಡಿಸಬಾರದು, ಕಣ್ಣುತುಂಬ ನೀರು ತುಂಬಿಕೊಂಡು ಅವ ನನ್ನು ನೋಡಬಾರದು. ದರ್ಶನ ತಗೊಂಡು ಅವನಿಗೆ ಹೋಗಲು ಅಪ್ಪಣೆ ಕೊಡಬೇಕು !" ಆದರೆ ಇದೆಲ್ಲ ಹೇಳುವಾಗ ಸ್ವತಃ ಅವರ ಕಣ್ಣುಗಳೇ ಕಂಬನಿ ಹರಿಸುತ್ತಿದ್ದುವು. ಗಂಟಲ ನರ ಉಬ್ಬಿ ನಿಂತು ಮಾತು ತಡೆಯುತ್ತಿದ್ದುವು. ಕೈಕಾಲುಗಳು ಚಳಿ ಹಿಡಿದವರಂತೆ ಥರಥರನೆ ನಡುಗುತ್ತಿದ್ದುವು. ಎಂಥ ಕಠೋರ ಬಂಧನವಿದು. ಅಣ್ಣ, ತಮ್ಮ, ತಾಯಿ, ಮಗ, ಗಂಡ ಹೆಂಡತಿ.... ....ಈ ಎಲ್ಲ ಸಂಬಂಧಗಳು ತಾವರೆಯ ಬೇರುಗಳಂತೆ ಕುಟುಂಬದ ಜನರೆಲ್ಲರನ್ನೂ ಬಂಧಿಸಿರುತ್ತವೆ. ಅವುಗಳನ್ನೆಲ್ಲ ತೊಡೆದು ಹಾಕಿ ಸಾವಿನೆಡೆಗೆ ಸರಿಯುವುದು ಅಥವಾ ಸಾವಿನೆಡೆಗೆ ಕಳಿಸಿಕೊಡುವುದು ಎಷ್ಟು ಕಷ್ಟ. ಸಮುದ್ರದ ಬೃಹದಾಕಾರದ ಅಲೆಗಳಂತೇಳುವ ದುಃಖದ ತೆರೆಗಳನ್ನು ಸಂಬಂಧಿಕರೆದೆಯಲ್ಲಿ ತಗ್ಗಿಸುವುದು ಹೇಗೆ ಸಾಧ್ಯ ? ಈ ಬಂಧನ, ಈ ವೇದನೆ, ಈ ಯಾತನೆಯ ಶೃಂಖಲೆಯನ್ನು ಹೇಗೆ ಕತ್ತರಿಸುವುದು ? ಕರುಳ ಬಳ್ಳಿಯ ಬೆಸುಗೆ ಬಿಡಿಸಲಸಾಧ್ಯ.

ಅಮದಾರ ಗುಂಜಾಳ ಅವರ ಪತ್ನಿ ಆ ನಾಲ್ಕೂ ಜನ ಹುತಾತ್ಮರಿಗೆ, ಭಾರತಾಂಬೆಯ ವೀರಪುತ್ರರಿಗೆ, ಕ್ರಾಂತಿದಲದ ಹೆಮ್ಮೆಯ ಮಕ್ಕಳಿಗೆ ಆರತಿ ಮಾಡಲು ಸಿದ್ಧಳಾದಳು. ಕೈಯಲ್ಲಿ ತುಪ್ಪದಲ್ಲಿ ಹೊತ್ತಿಸಿಟ್ಟ ಜೋಡಿ ನೀಲಾಂಜನಗಳಲ್ಲಿಯ ಕುಡಿ ಬೆಳಕು ಸುತ್ತಲೆಲ್ಲ ಪಸರಿಸಿತು. ಊದುಬತ್ತಿಯ ಪರಿಮಳ ತೇಲಿ ಬಂದಿತು. ಅದರೊಂದಿಗೆ ಅವಳ ಕಣ್ಣುಗಳಿಂದ ಎರಡು ದೊಡ್ಡ ದೊಡ್ಡ ಹನಿಗಳುದುರಿದುವು.



"ಬ್ಯಾಡ........ಅಳಬಾರ್ದು ಯವ್ವಾ........" ಹಿಂದಿನಿಂದ ಶಂಕರಪ್ಪನ ದನಿ ಹರಿದು ಬಂದಿತು. ಅವಳು ಮುಂಗೈಯಿಂದ ಕಣ್ಣೊರೆಸಿಕೊಂಡು ಒಳಹೋದಳು.

ಆ ನಾಲ್ಕೂ ಜನರ ಹಣೆಗೆ ಕುಂಕುಮದ ತಿಲಕವಿಟ್ಟಳು. ಅವರ ಮೇಲೆ ಹೂ ಏರಿಸಿದಳು. ಆರತಿ ಬೆಳಗಿ ಅತ್ಯಂತ ಭಕ್ತಿಯಿಂದ ನಮಸ್ಕರಿಸಿದಳು. ಅಷ್ಟರಲ್ಲಿ ಎಲ್ಲರನ್ನೂ ಕರೆದುಕೊಂಡು ಶಂಕರಪ್ಪ ಒಳಬಂದರು. ಒಳಬರುತ್ತಲೇ ಮಲ್ಲಪ್ಪನವರ ತಂಗಿ ಚೆನ್ನವ್ವ ಒಳಗಿನ ಮುಸುಕು ಕತ್ತಲೆಯಲ್ಲಿ ಕಣ್ಣಿನ ಮೇಲೆ ಒತ್ತಡ ಹಾಕಿ ದಿಟ್ಟಿಸಿದಳು. ಮುಂದೆಯೇ ಅನತಿ ದೂರದಲ್ಲಿ ಮಲ್ಲಪ್ಪ ಕಾಣಿಸಿದರು. ತಕ್ಷಣ "ಯಪ್ಪಾ......ಮಲ್ಲಪ್ಪಾ.... ....ಅಣ್ಣಾ........" ಎಂದು ಹೃದಯ ಬಿರಿಯುವಂತೆ ಕಿರುಚುತ್ತ ಓಡಿಬಂದಳು. ಸುತ್ತಲಿನವರ ಎದೆಗಳಿಗೆ ಗುದ್ದಿದಂತಾಯ್ತು. ಎಲ್ಲರ ಕಣ್ಣುಗಳಿಂಥ ಬಳಬಳ ಕಂಬನಿಗಳುರುಳತೊಡಗಿದುವು.

ಮಲ್ಲಪ್ಪನವರಿದ್ದ ಕೋಣೆಯ ಕಬ್ಬಿಣದ ಬಾಗಿಲಿಗೆ ತಲೆ ಅಪ್ಪಳಿಸಿದ ಚೆನ್ನವ್ವ ಎಚ್ಚರ ತಪ್ಪಿ ಕೆಳಗುರುಳಿದಳು. ತಲೆಯಿಂದ ರಕ್ತ ಚಿಲ್ಲನೆ ಪುಟಿಯಿತು; ಹರಿದು ಮುಖದ ಮೇಲಿಳಿಯಿತು. ಹಿಂದೆ ನಿಂತಿದ್ದ ಮಲ್ಲಪ್ಪನವರ ಪತ್ನಿ ನೀಲವ್ವ ಕಣ್ಣವೆಯಿಕ್ಕದೆ ತನ್ನ ಪತಿಯ ಮುಖವನ್ನೇ ದಿಟ್ಟಿಸುತ್ತಿದ್ದಳು. ಮಾತು ಮರೆತ ಮೂಕಿಯಂತಾಗಿದ್ದಳು. ವೇದನೆಯೇ ಮೈವೆತ್ತಿ ನಿಂತಂತಹ ಸಜೀವ ಗೊಂಬೆಯಾಗಿದ್ದಳು. ಕಣ್ಣವೆ ಬಡಿಯಲಿಲ್ಲ. ನಾಲಿಗೆಯೆಂದೇನನ್ನೂ ನುಡಿಯಲಿಲ್ಲ. ಅಳಲಿಲ್ಲ, ನಗಲಿಲ್ಲ... ....ಉಹೂಂ ನೀಲವ್ವ ಈಗ ನಿರ್ಜೀವ ಚಿತ್ತಾರದ

ಬೊಂಬೆ. ಎರಡು ಕ್ಷಣಗಳು ಕಳೆದುವು. ಮೂರನೆಯ ಕ್ಷಣ ಅವಳೂ ಧಡಾರನೆ ನೆಲದ ಮೇಲೆ ಬಿದ್ದು ನೀರಿನಿಂದ ಬೇರ್ಪಟ್ಟ ಮೀನಿನಂತೆ ಹೊರಳಾಡತೊಡಗಿದಳು. ಅವಳ ಚಡಪಡಿಕೆ, ದುಃಖ, ಯಾತನೆಗಳು ವರ್ಣಿಸಲಸದಳ. ನಾಳೆಯೇ ವಿಧವೆಯಾಗಲು ಹೊರಟಿರುವ ಇವತ್ತಿನ ಮುತ್ತೈದೆ ಅವಳು. ನೀಲವ್ವ ಬಿದ್ದ ರಭಸಕ್ಕೆ ಕೈಯಲ್ಲಿಯ ಗಾಜಿನ ಬಳೆಗಳು ಚಟಚಟನೆ ಒಡೆದವು.

ಮಲ್ಲಪ್ಪನ ಐದಾರು ವರ್ಷದ ಮುಗ್ಧ ಮಗ ಮುಂದೆ ಬಂದು ನಿಂತ. ಅಚ್ಚ ಬಿಳಿಯ ಪಾಯಿಜಾಮಾ, ನೆಹರೂ ಶರ್ಟು ಧರಿಸಿ ತಲೆಗೆ ಜರಿಯಂಚಿನ ಕೆಂಪು ರುಮಾಲು ಸುತ್ತಿದ್ದ ಎಳೆ ಬಾಲಕ ! ಕಣ್ಣಿವೆ ಪಿಳುಕಿಸುತ್ತ ಗಾಬರಿಯಿಂದ ತಂದೆಯೆಡೆಗೆ ಪಿಳಿಪಿಳಿ ಕಣ್ಣು ಬಿಟ್ಟು ಮುಗ್ಧ ನೋಟ ಹರಿಸಿ ನಿಂತ ಹಸುಳೆ ! ತಂದೆಯ ನಾಳಿನ ಸಾವು, ಇಂದಿನ ಇಂಥ ಯಾತನಾಮಯ ಬದುಕು........ಯಾವುದನ್ನೂ ಅರಿಯದ ಐದು ವರ್ಷದ ಮಗು.

ತಂದೆಗೆ ನಮಸ್ಕರಿಸುವಂತೆ ಶಂಕರಪ್ಪನವರು ಆ ಮಗುವಿಗೆ ಹೇಳಿದರು. ಸಾವಿನ ಬೆನ್ನೇರಿ ನಿಂತ ತಂದೆಯ ಪಾದಗಳಿಗೆ ಏನೂ ಅರಿಯದ ಮುಗ್ಧ ಮಗನ ಅಂತಿಮ ನಮನ.

ಮಲ್ಲಪ್ಪನವರ ಎದೆಯಲ್ಲಿ ಮಮತೆ ಉಕ್ಕಿ ಭೋರ್ಗರೆಯಿತು. ಎಲ್ಲ ಒಳಮನಸ್ಸಿನಲ್ಲಿಯೇ; ಮೇಲೆ ಮಾತ್ರ ಮಹಾ ಮೌನಿ.

ಇನ್ನೇನು ಕಂಬನಿ ಕೆಳಗುರುಳುತ್ತವೆ ಎನ್ನುವಾಗ ಮಲ್ಲಪ್ಪ



ಮುಖ ತಿರುಗಿಸಿಕೊಂಡು ಅತ್ಯಂತ ದೀನರಾಗಿ, ಆರ್ತತೆಯೇ ಮೈವೆತ್ತಂತೆ ನುಡಿದರು.

"ಅಣ್ಣಾ........ಇವನನ್ನು ಇಲ್ಲಿಂದ ಕರಕೊಂಡು ಹೋಗ್ರೀ ........ಅವನಿಗೆ ನೋಡ್ಲಕ್ಕಾಗಲ್ಲ ನನ್ನಿಂದ........ಮಗನಿಗೆ ಕರಕೊಂಡು ಹೋಗ್ರೀ........"

ಮಲ್ಲಪ್ಪ ಇಷ್ಟು ಹೊತ್ತಿನವರೆಗೂ ತಡೆಹಿಡಿದ ಕಣ್ಣೀರು ಪಳಪಳನೆ ಕೆಳಗುರುಳಿದುವು. ಶಂಕರಪ್ಪ ಅವನನ್ನೆತ್ತಿಕೊಂಡು ಅಳುತ್ತ ಅಲ್ಲಿಂದ ಸರಿದು ಬಂದರು. ತಂದೆ....ತಾಯಿ, ಅಕ್ಕ.... ತಂಗಿ ಅಳಲಿದರು....ಬಳಲಿದರು.

ಮಲ್ಲಪ್ಪನವರ ಮಿತ್ರ ಸಮೂಹ ಒಳನುಗ್ಗಿತು. ಎಲ್ಲರಿಗೂ ಕೈಜೋಡಿಸಿ ಅವರು ನುಡಿದರು.

"ಚಳುವಳಿಯನ್ನು ಮುಂದುವರೆಸಿರಿ. ದೇಶಕ್ಕೆ ಸ್ವಾತಂತ್ರ್ಯ ಸಿಗುವ ವರೆಗೂ ನೀವು ವಿರಮಿಸಬಾರದು. ಎಲ್ಲರಿಗೂ ನನ್ನ ಕೊನೆಯ ನಮಸ್ಕಾರಗಳನ್ನು ತಿಳಿಸಿಬಿಡ್ರಿ."

ಒಂದು ಕಡೆಗೆ ಹೀಗೆ ಮಲ್ಲಪ್ಪ ತನ್ನವರನ್ನು ಬೀಳ್ಕೊಳ್ಳುತ್ತಿರುವಾಗ ಇನ್ನೊಂದು ಕಡೆಗೆ ಉಳಿದ ಸ್ನೇಹಿತರೂ ತಮ್ಮ ಜನರನ್ನು ಅಷ್ಟೇ ದುಃಖದಿಂದ ಬೀಳ್ಕೊಳ್ಳುತ್ತಿದ್ದರು.

ಭೇಟಿಯ ಸಮಯ ಸಮಾಪ್ತವಾಯಿತು. ಎಲ್ಲರೂ ಕಣ್ಣೊರಸಿಕೊಳ್ಳುತ್ತ ವಿದಾಯ ಹೇಳಿ ಹೊರಹೊರಟರು. ಆ ನಾಲ್ಕೂ ಜನರ ಸಿಂಹಗರ್ಜನೆ ಮೊರೆಯಿತು.

"ವಂದೇ ಮಾತರಂ........ಮಹಾತ್ಮಾ ಗಾಂಧೀ....ಕೀ ಜೈ"

## ಜನೆವರಿ ೧೨

ಹೊತ್ತು ಮುಳುಗುತ್ತಿತ್ತು. ಮುಚ್ಚಂಜೆಯ ಕತ್ತು ಕತ್ತರಿಸಿ ಸಂಜೆಗತ್ತಲು ಕಾಲಿರಿಸಿತು. ಆ ನಸುಗತ್ತಲೆ ದಟ್ಟವಾಗುತ್ತಿರುವಾಗ ಯರವಡಾ ಸೆರೆಮನೆ ಮೌನವಾಗಿ ನಿಂತಿತ್ತು.

ಯರವಡಾ ! ಅದು ಸೆರೆಮನೆಯಲ್ಲ. ದೇಶಭಕ್ತರ, ರಾಷ್ಟ್ರದೇವತೆಯ ಮಂಗಲ ಮಂದಿರ. ಆ ಮಂದಿರದಲ್ಲಿ ಎಷ್ಟು ಜನ ರಾಷ್ಟ್ರಭಕ್ತರು, ಕ್ರಾಂತಿವೀರರು ರಾಷ್ಟ್ರದೇವಿಯ ಪೂಜೆ ಮಾಡಿಲ್ಲ? ಎಷ್ಟು ಜನ ಭಾರತಾಂಬೆಯ ಪುತ್ರರತ್ನರು ಅಲ್ಲಿ ಆ ದೇವಿಯ ಸ್ವಾತಂತ್ರ್ಯಕ್ಕಾಗಿ ಗಲ್ಲಿನ ಕಂಬದ ಉರುಳಿಗೆ ಕತ್ತು ನೀಡಲಿಲ್ಲ ? ಈಗ ಇಲ್ಲಿ ಸೊಲ್ಲಾಪುರದ ಈ ನಾಲ್ಕು ಜನ ಕ್ರಾಂತಿವೀರರು ಫಾಸಿಗೆ ತಲೆ ಒಡ್ಡಿದರು.

ಕರಾಳವಾದ ಕೃಷ್ಣರಾತ್ರಿಯಲ್ಲಿ ಮೃತ್ಯುದೇವತೆ ಮಲ್ಲಪ್ಪ, ಸಾರಡಾ, ಶಿಂಧೆ, ಕುರ್ಬಾನ್ ಹುಸೇನರ ತಲೆಯ ಮೇಲೆ ಸುತ್ತಾಡುತ್ತಿತ್ತು.

ಆ ರಾತ್ರಿ ಜೇಲಿನ ಅಧಿಕಾರಿಗೆ ಹೆಚ್ಚಿನ ಕೆಲಸ. ಮರಣದ ಹೆದರಿಕೆಯಲ್ಲಿ ಅವರು ರಾತ್ರಿಯೆಲ್ಲ ದುಃಖಿಸುತ್ತ ಅಳುತ್ತ ಚಡಪಡಿಸುತ್ತಿರಬಹುದೇನೋ ಎಂದು ಸಂಶಯ ಅವನಿಗೆ. ಬೆಳಿಗ್ಗೆ ಎಂಟು ಗಂಟೆಯ ಸುಮಾರಿಗೆ ಗಲ್ಲಿಗೇರಿಸಿ ಕೊಲ್ಲುವವರನ್ನು ಅವನು ರಾತ್ರಿಯಿಡೀ ಕಣ್ಣಲ್ಲಿ ಕಣ್ಣಿಟ್ಟು ಕಾದ. ಅದಾವುದರ ಪರಿವೆಯೇ ಇಲ್ಲದೆ ಆ ವೀರಪುತ್ರರು ಗಾಢನಿದ್ರೆಯಲ್ಲಿ ತನ್ಮಯರಾಗಿದ್ದರು.



ಬೆಳಿಗ್ಗೆ ಅಧಿಕಾರಿ ಮಲ್ಲಪ್ಪ ಧನಶೆಟ್ಟಿಯವರನ್ನೆಬ್ಬಿಸುತ್ತ ಅಚ್ಚರಿಯ ದನಿಯಲ್ಲಿ ಕೇಳಿದ.

"ಇನ್ನು ಸ್ವಲ್ಪ ಹೊತ್ತಿನಲ್ಲಿ ನೀನು ಸಾವಿನ ತೆಕ್ಕೆಯಲ್ಲಿರುತ್ತಿಯಾ........ನಿನಗೆ ಹೆದರಿಕೆಯಾಗುವುದಿಲ್ಲವೆ ?"

"ಹೆದರಿಕೆ ? ಹೆದರಿಕೆ ನನಗಲ್ಲ. ನಿಮ್ಮ ಸರ್ಕಾರಕ್ಕಿದೆ. ನಮ್ಮ ಕೈಕಾಲುಗಳಿಗೆ ಸರಪಳಿ ಬಿಗಿದು, ಕಬ್ಬಿಣದ ಬಾಗಿಲಿನ ಹಿಂದೆ ಬಂಧಿಸಿದೆಯಲ್ಲ ನಿಮ್ಮ ಸರ್ಕಾರ, ಅದು ನಾಚಿಕೆಪಡಬೇಕು. ನಮ್ಮ ಕೈಯಲ್ಲಿ ಆಯುಧ ಕೊಟ್ಟು ನಿಮ್ಮ ಸೈನಿಕರನ್ನು ಬಿಟ್ಟು ನೋಡಿ, ಯಾರಿಗೆ ಹೆದರಿಕೆ ಎಂಬುದು ತಿಳಿಯುತ್ತದೆ." ಮಲ್ಲಪ್ಪನವರ ಗಂಡೆದೆಯ ಸಿಂಹವಾಣಿಗೆ ಆ ಅಧಿಕಾರಿ ಮುಗುಳುನಕ್ಕು 'ಭೇಷ್' ಎಂದಿರಬೇಕು.

ಬೆಳಗಾಗತೊಡಗಿತು. ನಾಲ್ಕೂ ಜನ ಎದ್ದು ಕುಳಿತರು. ಸ್ನಾನಮಾಡಿ ಸ್ವಾತಂತ್ರ್ಯದೇವಿಯ ಅರ್ಚನೆಗೈದರು. ಕುಲದೇವತೆಗಳ ಪೂಜೆ ಮಾಡಿದರು. ಹೂವು ? ಎಲ್ಲಿಯ ಹೂವು ? ಎಲ್ಲಿಯ ಪತ್ರಿ ? ದೇಹದ ಹೂವು, ರಕ್ತದ ಗಂಧ, ಉಸಿರಿನ ಧೂಪ, ಕಂಗಳ ಹೊಳಪಿನ ದೀಪದಾರತಿ ಎತ್ತಿ ತಮ್ಮ ಕೊನೆಯ ಪೂಜೆ ಸಲ್ಲಿಸಿದರು. ಮಲ್ಲಪ್ಪ ಧನಶೆಟ್ಟಿ ಭೂಮಿತಾಯಿಯನ್ನು ಸ್ಪರ್ಶಿಸಿ ಹಣೆಗೆ ವಿಭೂತಿ ಪಟ್ಟೆ ಎಳೆದರು. ಕಣ್ಣುಮುಚ್ಚಿ ಕುಲದೇವರಾದ ಕಲ್ಯಾಣದ ಬಸವಣ್ಣನವರನ್ನು ನೆನೆದರು. ಸೊಲ್ಲಾಪುರದ ಸಿದ್ಧರಾಮನನ್ನು ಸ್ಮರಿಸಿದರು.

ಕಾರಾಗೃಹದ ವಧಾಗೃಹದಲ್ಲಿ ಈ ವೀರರ ಫಾಸಿಯ ಸಿದ್ಧತೆ ನಡೆಯಿತು. ಗೃಹಮಂತ್ರಿ ನಾ. ಹಾಟ್‌ಸನ್‌ರೇ ಸ್ವತ-

ಉಪಸ್ಥಿತರಾಗಿದ್ದರು. ಪುಣೆಯ ಸಿಟಿ ಮ್ಯಾಜಿಸ್ಟ್ರೇಟ ಮಿಸ್ಟರ ಫ್ಲೇಮಿಂಗ್, ಯರವಡಾ ಸೆರೆಮನೆಯ ಅಧಿಕಾರಿ ಮೇಜರ್ ಮಾರ್ಟಿನ್, ಮತ್ತೊಬ್ಬ ಡಾಕ್ಟರ ಮೊದಲಾದ ಅವಶ್ಯಕವೆನ್ನಿಸುವಷ್ಟು ಜನ ಬಂದು ಸೇರಿದರು. ಐದು ಗಂಟೆಯಾಗಿ ಮುವ್ವತ್ತು (೫-೩೦) ನಿಮಿಷಕ್ಕೆ ಸರಿಯಾಗಿ ಆ ದೇಶಭಕ್ತರನ್ನು ವಧಗೃಹಕ್ಕೆ ಕರೆತರಲು ಅಪ್ಪಣೆ ಕೊಟ್ಟರು.

ಪ್ರಥಮವಾಗಿ ಜಗನ್ನಾಥ ಶಿಂಧೆಯ ಕೋಣೆಯ ಬಾಗಿಲ ಬೀಗ ತೆಗೆಯಿತು. ವನರಾಜನಂತೆ ಧೀರ ಹೆಜ್ಜೆಯಿಡುತ್ತ ಜಗನ್ನಾಥ ಶಿಂಧೆ ತಮ್ಮ ಕೋಣೆಯಿಂದ ಹೊರಬರುತ್ತ ವಧಾಗೃಹದೆಡೆಗೆ ನಡೆದರು. ನಡೆಯುತ್ತಲೇ ಕಾರಾಗೃಹ ಕಂಪಿಸುವಂತೆ ಗರ್ಜಿಸಿದರು.

“ಗೆಳೆಯರೇ, ನನ್ನದು ಮೊದಲನೇ ನಂಬರ್. ನನ್ನದೇ ಮೊದಲ ಮರ್ಯಾದೆ— —ಇಗೋ ಹೊರಟೆ, ‘ವಂದೇ ಮಾತರಂ’ ‘ಮಹಾತ್ಮಾ ಗಾಂಧೀಜೀಕಿ ಜೈ”

ಜಗನ್ನಾಥ ವಧಾಸ್ತಂಭದ ಪಾದದ ಮೇಲೇರಿ ನಿಂತುಬಿಟ್ಟರು.

ಅವರ ಮುಖಕ್ಕೆ ಕಪ್ಪು ಮುಸುಕು ಬಿದ್ದಿತು. ಈಗ ಐದು ಗಂಟೆಯಾಗಿ ಮುವ್ವತ್ತು ಮೂರು ನಿಮಿಷಗಳಾಗುತ್ತಿದ್ದುವು. ಅಷ್ಟರಲ್ಲಿ ಶಬ್ದವಾಯಿತು. ಖಟ್ ಖಟ್ ಖಡಲ್—

ಎರಡನೆಯ ಸರದಿ ಶ್ರೀಕಿಸನ್ ಸಾರಡಾ ಅವರದು. ಅವರೂ ಧೈರ್ಯದಿಂದಲೇ ವಧಾಸ್ತಂಭ ಹತ್ತಿ ಕತ್ತು ನೀಡಿದರು. ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದ ಈ ಲಕ್ಷ್ಮೀ ಪುತ್ರ ಸ್ವಾತಂತ್ರ್ಯ ಲಕ್ಷ್ಮಿಯ ಚರಣಗಳಲ್ಲಿ ವಿಲೀನರಾದರು.



ಮೃತ್ಯುಮನೆಗೊಯ್ಯುವ ದಾರಿಯ ಮೇಲೆ ನಡೆಯುವ ಮೂರನೆಯ ಸರದಿ ಮಲ್ಲಪ್ಪ ಧನಶೆಟ್ಟಿಯವರದಾಯಿತು.

ಮಲ್ಲಪ್ಪ ಧನಶೆಟ್ಟಿಯವರನ್ನು ಬಂಧಿಸಿಟ್ಟ ಕೋಣೆಯ ಕಬ್ಬಿಣದ ಬಾಗಿಲು ತೆರೆಯಿತು. ಉನ್ಮತ್ತ ಗಜರಾಜನಂತೆ ಅವರು ದೃಢ ಹೆಜ್ಜೆಯಿಡುತ್ತ ಹೊರಬಂದರು. ಕುರ್ಬಾನ್ ಹುಸೇನರ ಕೋಣೆಯ ಬಳಿ ಹಾದು ಬರುವಾಗ ಯರವಡಾ ತತ್ತರಿಸುವಂತೆ ಘೀಳಿಟ್ಟರು.

“ದೋಸ್ತ .... .... ತುಮಸೆ ಪಹಿಲೆ ಹಮ್ .... ಸಲಾಮ್ !”

ಯುದ್ಧ ಭೂಮಿಯಿಂದ ಗೆದ್ದು ಬಂದ ಸೇನಾಪತಿ ರಾಜಗೃಹವನ್ನು ಪ್ರವೇಶಿಸುವಂತೆ ಮಲ್ಲಪ್ಪನವರು ತಲೆಯೆತ್ತಿ ಧೀರ ಗಂಭೀರ ನಡಿಗೆಯಿಂದ ವಧಾಗೃಹ ಪ್ರವೇಶಿಸಿದರು.

ಒಳಬಂದು ನಾಲ್ಕೂ ದಿಕ್ಕಿಗೆ ದೃಷ್ಟಿ ಬೀರಿದರು. ಹಾಟ್‌ಸನ್‌ರನ್ನು ಕಾಣುತ್ತಲೇ ಅವರ ಮುಖ ರೋಷದಿಂದ ಕೆಂಪಾಯಿತು. ಕಣ್ಣುಗಳು ಕಿಡಿ ಕಾರಿದುವು. ತಿರಸ್ಕಾರದಿಂದ ಅವನನ್ನೊಮ್ಮೆ ದೀರ್ಘವಾಗಿ ನಿಟ್ಟಿಸಿ ಜೋರಾಗಿ ಜಯಘೋಷ ಮಾಡಿದರು. “ಮಹಾತ್ಮಾ ಗಾಂಧೀಜೀಕಿ ಜೈ, ವಂದೇ ಮಾತರಂ, ಸಿದ್ಧೇಶ್ವರ ಮಹಾರಾಜಕೀ ಜೈ.”

ಅವರು ದೃಢವಾಗಿ ವಧಾಸ್ತಂಭದ ಹಲಗೆಯನ್ನು ಹತ್ತಿ ನಿಂತರು. ತಕ್ಷಣ ಅವರ ಮುಖಕ್ಕೆ ಕಡುಗಪ್ಪಿನ ಮುಸುಕು ಹಾಕಲಾಯಿತು. ಕಣ್ಣವೆ ಮುಚ್ಚಿ ತೆರೆಯುವಷ್ಟರಲ್ಲಿ ಸದ್ದು ಹೊರಟಿತು.

ಮುಗಿಯಿತು. ಮಲ್ಲಪ್ಪ ಧನಶೆಟ್ಟಿಯವರು ಅಮರಪದಾರೂಢರಾದರು. ಸ್ವಾತಂತ್ರ್ಯದೇವಿಯ ಪ್ರೀತಿಯ ಪುಷ್ಪವಾಗಿ ಅವಳ ಪಾದಸೇರಿದರು. ಹುತಾತ್ಮರಾದರು. ಮೂವತ್ತನಾಲ್ಕು ವರ್ಷ ವಯಸ್ಸಿಗೆಯೇ ಮಲ್ಲಪ್ಪನವರಿಗೆ ಈ ಪ್ರಪಂಚ ಮುಳುಗಿ ಹೋಯಿತು.

ಎಲ್ಲರಿಗಿಂತ ಚಿಕ್ಕವನು ಕುರ್ಬಾನ್ ಹುಸೇನ. ವಧಾಗೃಹ ಪ್ರವೇಶಿಸಿ ಇವರು ಎಲ್ಲರಿಗೂ ಧನ್ಯವಾದ ಸಲ್ಲಿಸಿದರು. "ಹಿಂದಭೂಮಿ, ತೇರೆ ಲಿಯೇಹಿ ಹಮ ಇಸ್ ದುನಿಯಾಕೊ ಛೋಡಕರ ಖುದಾಕೆ ತರಫ ಅರ್ಜಿ ಪೇಶ ಕರನೇಕೆಲಿಯೆ ಜಾ ರಹೇ ಹೈಂ" ಎಂದು ಗಂಭೀರವಾಗಿ ನುಡಿದು ವಧಾಸ್ತಂಭದ ಹಲಗೆ ತುಳಿದರು. ಜಯಘೋಷ ಮಾಡಿದರು. ಕಪ್ಪನೆಯ ಮುಸುಕಿನಲ್ಲಿ ಅವರ ಮುಖ ಮರೆಯಾಯಿತು. ಮರುಕ್ಷಣ ಅದೇ ಶಬ್ದ ಹೊರಹೊರಟಿತು.

ಮುಗಿಯಿತು. ನಾಲ್ಕೂ ಜನರು ಹುತಾತ್ಮರಾದರು. ಭಾರತದ ಮುವ್ವತ್ತು ಮೂರು ಕೋಟಿ ಜನತೆಯ ಎದೆಗೆ ಬೆಂಕಿಯಿಟ್ಟಂತಾಯಿತು. ಚಡಪಡಿಸಿದರು, ಅತ್ತರು. ಖಟ್ಲೆ ಹಾಕಿ ಅವರೆಲ್ಲರನ್ನೂ ಬಂಧಿಸಿ ಬೇಕೆಂದೇ ಕೊಲ್ಲಲಾಯಿತು. ಮಾಡದ ತಪ್ಪಿಗೆ ಪ್ರಾಣ ತೆರಬೇಕಾದ ದುರದೃಷ್ಟ ಅವರದು.

## ಶ್ರದ್ಧಾಂಜಲಿ

ಯರವಡಾ ಕಾರಾಗೃಹದ ಸುತ್ತಮುತ್ತ ಸಶಸ್ತ್ರ ಪೋಲಿಸರ ಕಾವಲನ್ನು ಜನೆವರಿ ೧೧ ರ ರಾತ್ರಿಯಿಂದಲೇ ಏರ್ಪಡಿಸಲಾಗಿತ್ತು. ದೂರದೂರದ ವರೆಗೂ ಸಶಸ್ತ್ರ ಸಿಪಾಯಿಗಳೇ. ಮಾರನೆಯ ಬೆಳಗಾದಾಗ ಬಂಡಗಾರ್ಡನ ಮಾರ್ಗವಾಗಿ ಬಂದ ಜನರ ಹಿಂಡು ಗದ್ದಲವೆಬ್ಬಿಸಿತು.



"ನಮ್ಮ ಜನರ ಶವಗಳನ್ನು ನಮಗೆ ಕೊಡಬೇಕು, ನಾವೇ ಸಂಸ್ಕಾರ ಮಾಡ್ತೇವೆ".

ಅವರ ಬೇಡಿಕೆ ಈಡೇರಿಸುವವರಾರು ? ಲಾಠಿಗಳ ಏಟುಗಳೇ ಅವರಿಗೆ ಸಿಕ್ಕವು. ನೂರಾರು ಜನ ಗಾಯಗೊಂಡರು, ಪುಣೆಯಲ್ಲಿ ಹರತಾಳಗಳು ಏರ್ಪಟ್ಟವು. ಮಧ್ಯಾಹ್ನ ನಾಲ್ಕಾರು ಸಾವಿರ ಜನರು ಗಲ್ಲಿನ ಶಿಕ್ಷೆಯ ವಿರುದ್ಧ ಮೆರವಣಿಗೆ ಹೊರಡಿಸಿ ಬ್ರಿಟಿಷ್ ಸರ್ಕಾರಕ್ಕೆ ಧಿಕ್ಕಾರ ಹಾಕಿದರು.

ಶಿವಾಜಿ ಮಂದಿರದ ತರುಣ ಸಂಘ ಇದೇ ತತ್ವದ ಮೇಲೆ ಇನ್ನೊಂದು ಮೆರವಣಿಗೆ ಹೊರಡಿಸಿತು. ಈ ಮೆರವಣಿಗೆಯಲ್ಲಿ ೨೦–೨೫ ಸಹಸ್ರ ಜನರಿದ್ದರು. ಎಲ್ಲರೂ ನವಯುವಕರು. ಬಿಸಿರಕ್ತದ ಏರು ಹರೆಯದ ಹುಡುಗರು.

ಆದರೆ ಶಿವಾಜಿರಾವ ಫಾಟಕದ ಬಳಿ ಸರ್ಕಾರ ೧೪೪ ರ ಕಲಮುಜಾರಿಗೆ ತಂದು ಈ ಮೆರವಣಿಗೆಯನ್ನು ತಡೆದು ಯುವಕರನ್ನು ಬಂಧಿಸಲೆತ್ನಿಸಿತು. ಆದರೆ ಆ ಯುವಕರ ಗುಂಪು ಮೆರವಣಿಗೆ ಜಯಘೋಷ ಹೊರಡಿಸುತ್ತ ಮುಂದುವರೆಯಿತು. ಶನಿವಾರ ವಾಡೆಯ ಬಳಿ ಬಂದು ಸಭೆ ಸೇರಿತು. ನಾಲ್ಕು ಜನ ಹುತಾತ್ಮರಿಗೆ ಶ್ರದ್ಧಾಂಜಲಿ ಸಲ್ಲಿಸಿತು.

ಮುಂಬಯಿಯಲ್ಲಿಯೂ ಸಂಘಸಂಸ್ಥೆಗಳು ಮೆರವಣಿಗೆ ಹೊರಡಿಸಿದುವು. ಈ ಹುತಾತ್ಮರಿಗೆ ಶ್ರದ್ಧಾಂಜಲಿ ಸಮರ್ಪಿಸಿ

ದುವು. ಭಾರತದ ಎಲ್ಲೆಡೆಯಲ್ಲಿಯೂ ಅವತ್ತು ಇದೇ ಕಾರ್ಯಕ್ರಮ.

ಸ್ವತಃ ಸೊಲ್ಲಾಪುರದಲ್ಲಿ ?

ನಾಲ್ಕೂ ಜನರನ್ನು ಫಾಸಿಗೇರಿಸಿದ ಸುದ್ದಿ ಬೆಂಕಿಯ ಮಳೆಯಂತೆ ಸುರಿಯಿತು. ಜನರ ನಡುವೆ ಕೋಲಾಹಲವೇರ್ಪಟ್ಟಿತು. ಒಂದೆಡೆ ಗೋಳಾಡುವ, ಅಳುವ, ಚಡಪಡಿಸುವ ಹೃದಯ ಭೇಧಿಸುವ ದೃಶ್ಯವಾದರೆ ಇನ್ನೊಂದೆಡೆ ಸಿಟ್ಟು, ಸಂತಾಪ, ರೋಷ, ಆವೇಶಗಳಿಂದ ಒದರಾಡುವ ಉದ್ರಿಕ್ತ ದೃಶ್ಯ.

ವಿದ್ಯಾರ್ಥಿಗಳು ಶಾಲೆ ತೊರೆದು ಹೊರಬಿದ್ದರು. ಮಿಲ್ಲುಗಳ ಕೆಲಸಗಾರರು ಕೆಲಸ ಬಿಟ್ಟು ಬೀದಿಗಿಳಿದರು. ಕಾರ್ಮಿಕರು ಸಂಘಟಿತರಾದರು, ಹರತಾಳಗಳೇರ್ಪಟ್ಟವು. ಸಂಕ್ರಾಂತಿ ಸಮಯದಲ್ಲಿ ಊರಲ್ಲಿ ಊರದೇವತೆ ಶ್ರೀ ಸಿದ್ದೇಶ್ವರರ ಜಾತ್ರೆ ಸಿದ್ಧತೆ ನಡೆದಿತ್ತು. ಪರ ಊರುಗಳಿಂದ ಲಕ್ಷಗಟ್ಟಲೆ ಜನರು ಬರುತ್ತಿರುವಾಗ ಈ ಸುದ್ದಿ ಪ್ರೇತಕಳೆಯಂತೆ ನಗರದ ಚಟುವಟಿಕೆಗಳನ್ನು ಸ್ಥಗಿತಗೊಳಿಸಿತು.

ಸಿದ್ದೇಶ್ವರರ ಜಾತ್ರೆಯಲ್ಲಿ ನಂದಿಕೋಲುಗಳ ಮೆರವಣಿಗೆ ಸುಪ್ರಸಿದ್ಧ. ಊರೂರುಗಳಿಂದ ಯುವಕರು ನಂದಿಕೋಲುಗಳನ್ನಾಡಿಸುತ್ತ ಬರುವ ವಾಡಿಕೆ. ಜಾತ್ರೆ ಪ್ರಾರಂಭವಾಗುವುದು ಜನೆವರಿ ೧೪ ರಂದು. ರಥೋತ್ಸವ ಅವತ್ತೇ. ದಿನಾಂಕ ೧೨ ರಂದು ಪ್ರಥಮ ನಂದಿಕೋಲುಗಳನ್ನು ಮಲ್ಲಪ್ಪ ಧನಶೆಟ್ಟಿಯವರೇ ಆಡಿಸುತ್ತ ತರುವ ಸಂಪ್ರದಾಯ ಬೆಳೆದು ಬಂದಿತ್ತು.

ದಿನಾಂಕ ೧೩ ಜನೆವರಿಯ 'ಕೇಸರಿ' ಪತ್ರಿಕೆ ಸರ್ಕಾರವನ್ನು ಖಂಡಿಸಿ ಹುತಾತ್ಮರಿಗೆ ಸಂತಾಪ ಸೂಚಿಸಿತು. ನಾಗಪುರದ ಪತ್ರಿಕೆ 'ಮಹಾರಾಷ್ಟ್ರ' ಬ್ರಿಟಿಷರ ನಿರ್ದಯತ್ವದ ಮೇಲೆ ಉಗ್ರ ಬರಹ ಪ್ರಕಟಿಸಿ ಅಮರರಾದವರಿಗೆ ಶೃದ್ಧಾಂಜಲಿ ಸಲ್ಲಿಸಿತು. ಮುಂಬಯಿಯ 'ಕ್ರಾನಿಕಲ್' ಮತ್ತು 'ನವಾಕಾಳ' ಪತ್ರಿಕೆಗಳು ಸರ್ಕಾರದ ವಿರುದ್ಧ ಬಹಳಷ್ಟು ಬರೆದುವು.



ಜನೆವರಿ ೧೨ ರಂದು ಸುದ್ದಿ ತಿಳಿದ ಮಲ್ಲಪ್ಪ ಧನಶೆಟ್ಟಿಯವರ ಮನೆ ದುಃಖಾಗ್ನಿಯಿಂದ ಹೊತ್ತಿ ಉರಿಯಿತು. ವೃದ್ಧ ರೇವಣಸಿದ್ದಪ್ಪ ಗೋಳೋ ಎಂದು ಅತ್ತರು. ಶಂಕರಪ್ಪ ಆರ್ಭಟಿಸಿದರು. ಹೆಂಗಸರ ರೋದನದ ಸ್ವರ ಆಗಸಕ್ಕೇರಿತು. ನೆಲಕಚ್ಚಿ ಬಿದ್ದ ನೀಲವ್ವನ ಕೈಯ ಬಳೆಗಳು ಚಟಚಟನೆ ಒಡೆದು ಪುಡಿ ಪುಡಿಯಾದುವು. ಮಾಂಗಲ್ಯ ಹರಿದು ಬಿದ್ದಿತು. ಕುಂಕುಮ ಅಳಿಸಿ ಹೋಯಿತು. ಮಗು ಶಿವಶಂಕರ ಅನಾಥನಾದ.

## ಜೀವಕ್ಕೆ ಜೀವ

ಮಲ್ಲಪ್ಪ ಧನಶೆಟ್ಟಿ ಮತ್ತಿತರರ ಗಲ್ಲಿನ ಶಿಕ್ಷೆ ಸೊಲ್ಲಾಪುರದ ಜನತೆಯನ್ನು ಅದರಲ್ಲಿಯೂ ತರುಣ ಸಮೂಹವನ್ನು ಸುಮ್ಮನಿರಲು ಬಿಡಲಿಲ್ಲ. ಎಲ್ಲರ ಎದೆಗಳಲ್ಲಿ ಜಾಗೃತಿಯುಂಟಾಯಿತು. ನಿರಪರಾಧಿ ದೇಶಭಕ್ತರ ಮೇಲಿನ ಅನ್ಯಾಯದ ಗಲ್ಲಿನ ಶಿಕ್ಷೆ ತರುಣರ ಅಂತಃಕರಣಕ್ಕೆ ಬೆಂಕಿಯಿಟ್ಟಿತು. ಉಗ್ರಗಾಮಿ ತರುಣರ ರಕ್ತ ಕುದಿಯಿತು. ರಾಷ್ಟ್ರದ ಹಿತಕ್ಕಾಗಿ, ಆ ನಾಲ್ಕು ಜನ ದೇಶಭಕ್ತರ ಮೇಲಿನ ಅನ್ಯಾಯಕ್ಕಾಗಿ, ಈ ಬ್ರಿಟಿಷ್ ಸರ್ಕಾರದ ವಿರುದ್ಧ ಸೇಡು ತೀರಿಸಿಕೊಳ್ಳಲಾರದೆ ಬಿಡಲಾರೆವು

ಅವರ ಫಾಸಿಯ ಸೇಡು ತೀರಿಸಿಕೊಂಡೇ ತೀರುತ್ತೇವೆ ! ಎನ್ನುವ ಪ್ರತಿಜ್ಞೆಗೆ ಪ್ರಚೋದಿಸಿತು.

ಹಾಗೆ ಪ್ರತಿಜ್ಞೆಮಾಡಿ ಹೃತ್ಪೂರ್ವಕವಾಗಿ ಈ ಕಾರ್ಯಕ್ಕೆ ಕಂಕಣ ಕಟ್ಟಿ ನಿಂತವನು ೨೧ ವರ್ಷದ ಏರುಜವ್ವನದ ಗಂಡೆದೆಯ ತರುಣ ವಾಸುದೇವರಾವ ಗೋಗಟೆ. ಪುಣೆಯ ಫರ್ಗ್ಯೂಸನ್ ಕಾಲೇಜಿನಲ್ಲಿ ಜ್ಯೂನಿಯರ್ ಬಿ. ಎ. ವಿದ್ಯಾರ್ಥಿ.

ವಾಸುದೇವ ಗೋಗಟೆ ಸೇಡಿನ ಶಪಥ ತೆಗೆದುಕೊಳ್ಳುವಾಗ ಒಂದೇ ವಿಚಾರದಲ್ಲಿ ಮಗ್ನನಾದ. ಯಾರಿಂದ ಈ ಎಲ್ಲ ಅನಾಹುತ ನಡೆಯಿತೋ ಯಾರಿಂದ ಮಲ್ಲಪ್ಪ ಮತ್ತು ಅವರ ಸಂಗಡಿಗರಿಗೆ ಅನ್ಯಾಯದ ಗಲ್ಲಿನ ಶಿಕ್ಷೆ ವಿಧಿಸಲ್ಪಟ್ಟಿತೋ ಅವರನ್ನೇ ಕೊಂದುಬಿಡಬೇಕು. ಮೂಲ ಕಾರಣರಾದ ಅವರನ್ನೇ ಇಲ್ಲವಾಗಿಸಿ ಬಿಡಬೇಕು. 'ಜೀವಕ್ಕೆ ಜೀವ' ಇದೇ ನನ್ನ ಸೇಡಿನ ಕ್ರಮ ಎಂದವನು ನಿರ್ಧರಿಸಿದ. ಈ ಅಮಾನುಷ ಪ್ರಕರಣಕ್ಕೆ ಮೂಲ ಕಾರಣರು ಅಂದಿನ ಕಲೆಕ್ಟರ ಮಿಸ್ಟರ್ ನಾಯಿಟ್ ಮತ್ತು ಮುಂಬಯಿಯ ಹಂಗಾಮಿ.ಗವರ್ನರ್ ಸರ್ ಹಾಟ್ಸನ!

ಸೇಡು ತೀರಿಸಿಕೊಳ್ಳುವುದೇ ಆದರೆ ಹಿರಿಯ ಅಧಿಕಾರಿಯಾಗಿದ್ದ ಹಾಟ್ಸನ್‌ನ ಮೇಲೆಯೇ ಮೊದಲು ತೀರಿಸಿಕೊಳ್ಳಬೇಕು. ಅವನೇ ಈ ನಾಲ್ಕು ಜನರ ಮರಣಕ್ಕೆ ಮೂಲ. ಆ ಹುತಾತ್ಮರ ಫಾಸಿಗೆ ನಾಯಿಟ್‌ಕ್ಕಿಂತಲೂ ಹಾಟ್ಸನ್‌ನೇ ಹೆಚ್ಚಿಗೆ ಜವಾಬ್ದಾರನು. ಮೊದಲು ಅವನನ್ನೇ ಆಹುತಿ ತೆಗೆದುಕೊಳ್ಳಬೇಕು. ಅಂದರೆಯೇ ಸೇಡು ಪರಿಣಾಮಕಾರಿಯಾಗು



ತ್ತದೆ. ಹಾಟ್ಸನ್‌ನೇ ತನ್ನ ಪ್ರಥಮ ಬೇಟೆ ಎಂದು ಗೋಗಟೆ ನಿಶ್ಚಯಿಸಿದನು.

ಸೊಲ್ಲಾಪುರದ ಮಧ್ಯದಲ್ಲಿ ಸರಸ್ವತಿ ಟಾಕೀಜಿನಲ್ಲಿ (ಚಿತ್ರಾ ಟಾಕೀಜ) ಅಂದು 'ವತ್ಸಲಾಹರಣ' ಚಿತ್ರ ಪ್ರದರ್ಶಿಸಲಾಗುತ್ತಿತ್ತು. ಜನ ಚಿತ್ರ ನೋಡುವದರಲ್ಲಿ ತನ್ಮಯರಾಗಿದ್ದರು. ಚಿತ್ರ ಮುಗಿಯುವ ಹಂತದಲ್ಲಿದ್ದಾಗ ಚಿತ್ರಮಂದಿರದ ತುಂಬ ಕಪ್ಪನೆಯ ಬರಹ ಹೊತ್ತು ಅಚ್ಚಾದ ಕಾಗದದ ರಾಶಿ ಬಿದ್ದಿತು. ಕಾಗದಗಳು ಎಲ್ಲ ಕಡೆಗೂ ಚಲ್ಲಾಪಿಲ್ಲಿಯಾಗಿ ಹಾರಾಡತೊಡಗಿದುವು. ಅಷ್ಟರಲ್ಲಿ ಚಿತ್ರ ಮುಗಿಯಿತು. ಎಲ್ಲೆಡೆಗೂ ಲೈಟುಗಳಿಂದ ಬೆಳಕು ಪ್ರಸರಿಸಿತು. ಎಲ್ಲರ ಕೈಯಲ್ಲಿಯೂ ಕಾಗದಗಳು, ಎಲ್ಲರ ಕಣ್ಣುಗಳೂ ಅದರಲ್ಲಿಯ ಬರಹದ ಮೇಲೆ ನಟ್ಟವು.

"ಮಲ್ಲಪ್ಪ ಧನಶೆಟ್ಟಿ ಮೊದಲಾದ ನಾಲ್ಕು ಜನ ದೇಶಭಕ್ತರ ಗಲ್ಲಿನ ಸೇಡು ತೀರಿಸಿಕೊಳ್ಳಲೇಬೇಕು. ತೀರಿಸಿಕೊಂಡೇ ಬಿಡುತ್ತೇವೆ."

ವಾಸುದೇವ ಗೋಗಟೆಗೆ ರಿವಾಲ್ವರ ಬೇಕಾಗಿತ್ತು. ಜೂನಿಯರ ಬಿ. ಎ. ದ ವಿದ್ಯಾರ್ಥಿಯಾದ ಅವನಿಗೆ ಅದು ದೊರೆಯುವುದು ಹೇಗೆ ? ಹಣ ಎಲ್ಲಿಂದ ? ಗೋಗಟೆಗೆ ಕಾಲೇಜಿನ ಅಭ್ಯಾಸಕ್ಕಾಗಿ ಅವನ ತಂದೆಯಿಂದ ಪ್ರತಿ ತಿಂಗಳೂ ನೂರು ರೂಪಾಯಿ ಮನಿಯಾರ್ಡರ ಬರುತ್ತಿತ್ತು. ಅವನು ಆ ಹಣವನ್ನು ರಿವಾಲ್ವರಿಗಾಗಿ ಕಾದಿಡತೊಡಗಿದ. ಹಾಸ್ಟೆಲ್ ಬಿಟ್ಟು ಸಣ್ಣ ರೂಮು ಬಾಡಿಗೆಗೆ ಹಿಡಿದ. ಹೋಟೆಲ್, ಸಿನೇಮಾ

ಕೊನೆಗೆ ಒಂದು ಹೊತ್ತಿನ ಊಟ, ಕಾಲಲ್ಲಿ ಚಪ್ಪಲಿ ಧರಿಸುವುದನ್ನು ಬಿಟ್ಟು ಹಣ ಕೂಡಿಸತೊಡಗಿದ. ಅವನ ಜೀವನದ ಗುರಿ ಸರ್ ಹಾಟ್‌ಸನ್‌ನನ್ನು ಕೊಲ್ಲುವದು. ಅದಕ್ಕಾಗಿ ಅವನು ಅವಿರತವಾಗಿ ಪರಿಶ್ರಮಿಸತೊಡಗಿದ.

ರಿವಾಲ್ವರಿಗಾಗಿ ಸಲಹೆ ಕೇಳಲು ಗೋಗಟೆ ಸ್ವಾತಂತ್ರ್ಯ ವೀರ ಸಾವರಕರರಲ್ಲಿಗೆ ಹೋದ. ತನ್ನ ಮನದ ಇಚ್ಛೆಯನ್ನು ಅವರಲ್ಲಿ ನಿವೇದಿಸಿಕೊಂಡ. ಹೇಗಾದರೂ ಮಾಡಿ ರಿವಾಲ್ವರನ್ನು ಕೊಡಿಸಬೇಕೆಂದು ಕಳಕಳಿಯಿಂದ ಪ್ರಾರ್ಥಿಸಿಕೊಂಡ.

ಸಾವರಕರರು ಪರೀಕ್ಷಿಸುವಂತೆ ಅವನನ್ನೇ ನೇರವಾಗಿ ದಿಟ್ಟಿಸಿದರು. ನಂತರ ನುಡಿದರು.

"ಇಚ್ಛೆ ಗಟ್ಟಿಯಾಗಿದ್ದರೆ ಆಯುಧಗಳು ತಾವಾಗಿಯೇ ಕೈಗೆ ಸಿಗುತ್ತವೆ. ಆದರೆ ಇದಕ್ಕಿಂತ ಮೊದಲು ನೀನು ಯಾರಂತೆ ಆಗಬೇಕೆನ್ನುವಿ ಎಂಬುದನ್ನು ವಿಚಾರ ಮಾಡು. ಟಿಳಕರಂತಾಗುವಿಯೊ ? ಅಥವಾ ಮಹಾತ್ಮಾ ಗಾಂಧೀಜಿಯಂತಾಗುವಿಯೊ ? ಅಥವಾ ಭಗತಸಿಂಗನಂತಾಗುವಿಯೋ ? ಇಂಥ ಉಗ್ರಕೃತ್ಯಕ್ಕೆ ಕೈಹಾಕಿದ ತರುಣ ಯಾರಲ್ಲಿಯೂ ವಿಚಾರ ವಿನಿಮಯ ಮಾಡುವುದಿಲ್ಲ. ಕಾರ್ಯ ಮಾಡಿಯೇ ಬಿಡುತ್ತಾನೆ."

ವೀರ ಸಾವರಕರರ ಮಾತುಗಳು ವಾಸುದೇವ ಗೋಗಟೆಯ ಎದೆಗೆ ನೇರವಾಗಿ ಅಪ್ಪಳಿಸಿದುವು, ಮೊದಲೆಯೇ ಗಟ್ಟಿಯಾಗಿದ್ದ ಅವನ ನಿರ್ಧಾರ ಈಗ ಕಗ್ಗಲ್ಲಿನಂತಾಯಿತು.

ಗೋಗಟೆ ಹೈದ್ರಾಬಾದಿಗೆ ಹೋಗಿ ರಿವಾಲ್ವರ ತೆಗೆದುಕೊಂಡೇ ಬಂದನು. ಅದೂ ಒಂದಲ್ಲ, ಎರಡು; ಐದು ಬಾರಿನ



ರಿವಾಲ್ವರಗಳು ಅವು. ಒಂದು 'ಡಾರ್ಕಬ್ಲೂ' ಪೇಂಟೆಡ್, ಇನ್ನೊಂದು 'ನಿಕ್ಕಲ್ ಪ್ಲೇಟೆಡ್'. ಅವುಗಳೊಂದಿಗೆ ಪುಣೆಗೆ ಹಿಂತಿರುಗಿದವನು ಹಗಲಿರುಳೂ ಬೇಟೆಗಾರ ತನ್ನ ಬೇಟೆಗಾಗಿ ಕಾಯುವಂತೆ ಕಾಯತೊಡಗಿದ.

ಸರ್ ಹಾಟ್‌ಸನ್ ಎಲ್ಲಿ ಸಿಗಬಹುದು ? ಹೇಗೆ ಅವನೆದೆಗೆ ಗುಂಡು ಹಾರಿಸುವುದು ? ಆ ಸಮಯ ಬೇಗ ಬರಬಾರದೆ ? ಗೋಗಟೆ ಕಾಲೇಜು ಮರೆತ. ಊಟ–ನಿದ್ರೆ ಬಿಟ್ಟು ತನ್ನ ಏಕೈಕ ಗುರಿಯ ಹಿಂದೆ ತಿರುಗತೊಡಗಿದ.

ಪುಣೆಯಲ್ಲಿ ಆಸೆಂಬ್ಲಿಯ ಅಧಿವೇಶನ ನಡೆಯುವ ಸುದ್ದಿ ಸಿಕ್ಕಿತು. ಆ ಅಧಿವೇಶನಕ್ಕೆ ಸರ್ ಹಾಟ್‌ಸನ್ ಬಂದೇ ಬರುವವನು. ಆ ಅಧಿವೇಶನದಲ್ಲಿ ತಾನು ಪ್ರೇಕ್ಷಕನಾಗಿ ಹೋಗಬೇಕು. ಆದರೆ ಹೇಗೆ ?

ಗೋಗಟೆ ತಾತ್ಯಾಸಾಹೇಬರ ಬಳಿಗೆ ಹೋಗಿ ವಿನಂತಿಸಿಕೊಂಡ. ಅವರ ಪ್ರಭಾವದಿಂದ ಪ್ರೇಕ್ಷಕರ ಗ್ಯಾಲರಿಯಲ್ಲಿ ಕುಳಿತುಕೊಳ್ಳಲು ಅವನಿಗೆ 'ಪಾಸ್' ದೊರೆಯಿತು. ಗೋಗಟೆ ಸರ್ವಸಿದ್ಧತೆಯೊಂದಿಗೆ ಅಲ್ಲಿಗೆ ಧಾವಿಸಿದ. ಕಣ್ಣಲ್ಲಿ ಕಣ್ಣಿಟ್ಟು ನೋಡಿದ ಅವನ ದುರ್ದೈವ ! ಅಂದು ಹಾಟ್‌ಸನ್ ಅಧಿವೇಶನಕ್ಕೆ ಬಂದಿರಲಿಲ್ಲ.

ನಿರಾಶನಾಗಿ ಗೋಗಟೆ ತಿರುಗಿಬಂದ. ನಗರದ ಬೀದಿಗಳಲ್ಲಿ ಸುತ್ತಾಡುವುದು, ಪತ್ರಿಕಾಲಯಗಳಿಗೆ ಹೋಗಿ ಹಾಟ್‌ಸನ್‌ನ ಬಗೆಗೆ ಸುದ್ದಿ ಸಂಗ್ರಹಿಸುವುದು ಇವೇ ಅವನ ದಿನದ ಕಾರ್ಯಗಳಾದುವು.

ಅಂದು ಅವನು ಫರ್‌ಗ್ಯೂಸನ್ ಕಾಲೇಜಿನ ಪ್ರವೇಶ ದ್ವಾರದ ಬಳಿ ಬರುವಾಗ ಅಲ್ಲಿ ಸಾರ್ಜಂಟ್ ನಿಂತಿದ್ದ ಹಾಗೆ ಪೋಲೀಸ್ ನಿಂತಿರಬೇಕಾದರೆ ಯಾರಾದರೂ ದೊಡ್ಡ ಅಧಿಕಾರಿಗಳು ಆಗ ಕಾಲೇಜಿಗೆ ಭೇಟಿಕೊಡುವವರಿದ್ದಾರೆಂದು ಅವನು ತರ್ಕಿಸಿದ. ತಡಮಾಡದೆ ಸಾರ್ಜಂಟನ ಬಳಿ ನಡೆದು ವಿಚಾರಿಸಿದ. ಅಂದು ೧೯೩೧ ರ ಜುಲೈ ೨೨.

ಅವನು ಕಾದ ಬೇಟೆ ಅವನ ಬಲೆಯೆಡೆಗೆ ಬರುತ್ತಿತ್ತು. ಸಾರ್ಜಂಟ್‌ನಿಂದ ಅಂದು ಕಾಲೇಜಿಗೆ ಹಾಟ್‌ಸನ್ ಬರುವ ಸುದ್ದಿ ತಿಳಿದು ಗೋಗಟೆಯ ಮೈಯಲ್ಲಿ ಉತ್ಸಾಹ ಪ್ರವಹಿಸಿತು. ತನ್ನ ರೂಮಿಗೆ ಓಟ ಕಿತ್ತ.

ಕೋಟು ಹಾಕಿಕೊಂಡು ಒಳಜೇಬಿನಲ್ಲಿ ಎರಡೂ ರಿವಾಲ್ವರಗಳನ್ನು ಬಾರು ಮಾಡಿಟ್ಟುಕೊಂಡ. ತಡಮಾಡದೆ ಕಾಲೇಜಿಗೆ ಧಾವಿಸಿದ.

ಅವನು ಮರಳಿಬಂದಾಗ ಸರ್ ಹಾಟ್‌ಸನ್ ಕಾಲೇಜಿನಲ್ಲಿ ಪ್ರವೇಶಿಸಿದ್ದ. ಪ್ರಿನ್ಸಿಪಾಲರು ಅವರಿಗೆ ಕಾಲೇಜಿನ ಕ್ಲಾಸ ರೂಮು ಮೊದಲಾದವನ್ನು ತೋರಿಸುತ್ತಿದ್ದರು. ಕಾಲೇಜಿಗೆ ಬಂದವರು 'ವಾಡಿಯಾ ಗಂಥಾಲಯ' ನೋಡದೆ ಹೋಗುತ್ತಿರಲಿಲ್ಲ. ಈ ವಿಷಯ ಅದೇ ಕಾಲೇಜಿನ ವಿದ್ಯಾರ್ಥಿಯಾಗಿದ್ದ ವಾಸುದೇವ ಗೋಗಟೆಗೆ ತಿಳಿದಿತ್ತು. ಅವನು ಗ್ರಂಥಾಲಯದೆಡೆಗೆ ಹೆಜ್ಜೆ ಹಾಕಿದ. ಅದೇ ತನಗೆ ಅನುಕೂಲವಾದ ಸ್ಥಳವೆಂದು ನಿಶ್ಚಯಿಸಿ ಒಳಹೋಗಿ ಮುಂದಿನ ಕುರ್ಚಿಯಲ್ಲಿ ಕಾದು ಕುಳಿತ. ಅವನ



ಕಣ್ಣು ಹೊರಗಡೆ ಬರುವ ಹಾಟ್‌ಸನ್‌ಗಾಗಿ ಕಾತರಿಸಿತು. ಕೈ ಮೃದುವಾಗಿ ಕೋಟಿನ ಜೇಬನ್ನು ಸ್ಪರ್ಶಿಸಿತು.

ಪ್ರಿನ್ಸಿಪಾಲ, ಹಾಟ್‌ಸನ್, ಅವನ ಅಂಗರಕ್ಷಕ ಕ್ಯಾಪ್ಟನ್ ಸಿಟೊ, ಎವಲೆಕರ ಮೊದಲಾದವರು ಗ್ರಂಥಾಲಯ ಪ್ರವೇಶಿಸಿದರು. ಗ್ರಂಥಾಲಯದ ಎರಡೂ ಬದಿಗಿರುವ ಚಿತ್ರಗಳನ್ನು ತೋರಿಸುವಲ್ಲಿ ಪ್ರಿನ್ಸಿಪಾಲರು ಮಗ್ನರಾಗಿದ್ದರು. ಗ್ರಂಥದ ದೇಣಿಗೆದಾರರ ಚಿತ್ರವೀಕ್ಷಣೆಯಲ್ಲಿ ಸರ್ ಹಾಟ್‌ಸನ್‌ನೂ ತನ್ಮಯನಾಗಿದ್ದ. ಅವರು ಹಾಗೆಯೇ ನೋಡುತ್ತ ನಡೆಯುತ್ತ ಗೋಗಟೆ ಕುಳಿತೆಡೆಗೆ ಸರಿದು ಬರುತ್ತಿದ್ದರು.

ಇವನ ಅವರ ನಡುವೆ ಕೇವಲ ನಾಲ್ಕು ಅಡಿಗಳ ಅಂತರ. ಅವರು ಚಿತ್ರ ನೋಡುವುದರಲ್ಲಿ ತಲ್ಲೀನ. ಗೋಗಟೆಗೆ ಇದೇ ಸಮಯ ಸರಿ ಎನಿಸಿತು. ಮೆಲ್ಲಗೆ ಕೋಟಿನ ಒಳಜೇಬಿನಿಂದ ನಿಕಲ್ ಪ್ಲೇಟಡ್ ರಿವಾಲ್ವರನ್ನು ಹೊರತೆಗೆದ. ಅವನೆಡೆಗೆ ಯಾರ ಲಕ್ಷ್ಯವೂ ಇರಲಿಲ್ಲ. ಮರುಕ್ಷಣ ಸರ್ ಹಾಟ್‌ಸನ್ ನೆದೆಗೆ ಗುರಿಯಿಟ್ಟು ಅತ್ಯಂತ ಧೈರ್ಯದಿಂದ ಗುಂಡು ಹಾರಿಸಿದನು. ಆ ಗುಂಡು ನೇರವಾಗಿ ಹಾಟ್‌ಸನ್‌ರ ಎದೆಗೆ ತಾಕಿತು.

ಆಕಸ್ಮಿಕವಾಗಿ ಅಬ್ಬರಿಸಿ ಕೇಳಿಸಿದ ಗುಂಡಿನ ಪ್ರಾಣಘಾತಕ ಸದ್ದು ಕೇಳಿ ಎಲ್ಲರೂ ಗಾಬರಿಯಿಂದ ಹಿಂದೆ ಸರಿದರು. ಸರ್ ಹಾಟ್‌ಸನ್ ಎದೆಗೆ ಕೈ ಹಚ್ಚಿ ಎರಡಡಿ ಹಿಂದೆ ಜಿಗಿದು ನಿಂತ. ಎರಡೂ ಕೈಗಳನ್ನೂ ಮೇಲೆತ್ತಿ ಗಾಬರಿಯಿಂದ ಮುಂದೆ ನೋಡುವಷ್ಟರಲ್ಲಿ ಗೋಗಟೆಯ ಪಿಸ್ತೂಲಿನಿಂದ ಸಿಡಿದ ಎರಡನೆಯ ಗುಂಡು ಹಾಟ್‌ಸನ್‌ನ ಹೊಟ್ಟೆಹೊಕ್ಕಿತು. ಆದರೆ ಹಾಟ್‌ಸನ್‌ನ

ಸುದೈವ, ಗೋಗಟೆಯ ದುರ್ದೈವವೆಂಬಂತೆ ಆ ಸಮಯದಲ್ಲಿ ಹಾಟ್ಸನ್ ಶರೀರದ ಮೇಲೆ ಲೋಹದ ಕವಚತೊಟ್ಟು ಬಟ್ಟೆ ಧರಿಸಿದ್ದ. ಗೋಗಟೆಯ ಪಿಸ್ತೂಲಿನಿಂದ ಸಿಡಿದ ಜೋಡಿ ಗುಂಡುಗಳು ಹಾಟ್ಸನ್‌ನನ್ನು ಕೊಲ್ಲಲಸಮರ್ಥವಾದವು. ಗೋಗಟೆ ಎರಡನೆಯ ಗುಂಡು ಹಾರಿಸಿದಾಗಲೇ ಹಾಟ್ಸನ್ ಹಾರಿ ಬಂದು ಅವನನ್ನು ಹಿಂದಕ್ಕೊತ್ತಿ ಬೀಳಿಸಿದ. ಕುರ್ಚಿಯಿಂದ ಕೆಳಗುರುಳಿದ ಗೋಗಟೆ ಉರುಳುತ್ತ ಉರುಳುತ್ತಲೇ ಸಾಹಸದಿಂದ ಮತ್ತೊಂದು ಗುಂಡನ್ನು ಹಾಟ್ಸನ್‌ರ ಮೇಲೆ ಹಾರಿಸಿದ. ಆದರೆ ಇದೂ ನಿರರ್ಥಕ !

ವಾಸುದೇವ ಗೋಗಟೆ ಮತ್ತು ಹಾಟ್ಸನ್‌ರ ಬಡಿದಾಟ ಪ್ರಾರಂಭವಾಯಿತು. ಗೋಗಟೆಯನ್ನು ಕೆಳಕೆಡವಿ ಹಾಟ್ಸನ್ ಅವನೆದೆಯ ಮೇಲೆ ಕುಳಿತು ಅವನ ಕತ್ತಿಗೆ ಕೈ ಹಾಕಿದ. ಹಾಟ್ಸನ್‌ರ ಅಂಗರಕ್ಷಕ ಕ್ಯಾಪ್ಟನ್ ಪಿಟೋ ಓಡಿಬಂದು ಗೋಗಟೆಯ ಕುತ್ತಿಗೆಯ ಮೇಲೆ ತನ್ನ ಬಲವಾದ ಗುರಿ ಇಟ್ಟು ಗೋಗಟೆಯ ಕೋಟಿನ ಒಳಜೇಬಿನಲ್ಲಿ ಕಾಣಿಸಿದ ಇನ್ನೊಂದು ಪಿಸ್ತೂಲನ್ನು ತೆಗೆದುಕೊಂಡ.

ಯಾರನ್ನು ಕೊಂದು ಸೇಡು ತೀರಿಸಿಕೊಳ್ಳಬೇಕೆಂಬ ಹಟದಿಂದ ಇಷ್ಟೆಲ್ಲ ಕಷ್ಟಪಟ್ಟು ಅವನೆಡೆಗೆ ಗುಂಡು ಹಾರಿಸಿದರೂ ಆ ಶತ್ರು ಸಾಯದೆ ತನ್ನೆದೆಯ ಮೇಲೆಯೇ ಕುಳಿತಿರುವುದು ಕಂಡು ಸ್ವಾಭಿಮಾನಿ ತರುಣ ವಾಸುದೇವ ಗೋಗಟೆಯ ಹೃದಯು ಅಸಹಾಯಕತೆಯಿಂದ ಮಿಲಮಿಲನೆ ಒದ್ದಾಡಿತು.

ಎಲ್ಲರೂ ಎದುರುಬದಿರಾಗಿ ನಿಂತರು. ಗೋಗಟೆ ಹಾಟ್ಸನ್‌ನನ್ನು ದುರುಗುಟ್ಟಿ ನೋಡಿದ. ಪ್ರಿನ್ಸಿಪಾಲ, ಕ್ಯಾಪ್ಟನ್ ಪಿಟೋ ಸ್ತಬ್ಧರಾದರು. ಗೋಗಟೆಯ ಮುಖದ ಮೇಲೆ ಕರ್ತವ್ಯ ನಿಭಾಯಿಸಿದ ತೇಜಸ್ಸು ತಾನೇ ತಾನಾಗಿತ್ತು. ಮೃತ್ಯು ಮುಖದಿಂದ ಉಳಿದು ಬಂದಿದ್ದ ಸಮಾಧಾನ ಹಾಟ್ಸನ್‌ರಿಗೆ.



ಕ್ಷಣದ ಅಸಹನೀಯ ಮೌನದ ನಂತರ ಸುಧಾರಿಸಿಕೊಂಡು ಸರ್ ಹಾಟ್ಸನ್ ಗೋಗಟೆಯನ್ನು ದಿಟ್ಟಿಸುತ್ತ ಸಿಟ್ಟಿನಿಂದ ಕೇಳಿದ.

''Why did you fire at me?''

''As a protest against your tyrannical administration in Sholapur.''

ಗೋಗಟೆ ನಿರ್ಭಯವಾಗಿ ಇಂಗ್ಲೀಷ್‌ನಲ್ಲಿಯೇ ಉತ್ತರಿಸಿ ತಲೆ ಕೊಡವಿದ.

"ಐ ಸೀ" ಹಾಸ್ಯದ ದನಿಯಲ್ಲಿ ಹಾಟ್ಸನ್ ಉದ್ಗಾರ ಹೊರಡಿಸಿದ.

ಅಷ್ಟರಲ್ಲಿ ಡಿ. ವಾಯ್. ಎಸ್. ಪಿ. ಮಿಸ್ಟರ್ ಮಿಲ್ಸ ಅಲ್ಲಿ ಬಂದರು. ವಾಸುದೇವ ಗೋಗಟೆಯವರ ಭುಜದ ಮೇಲೆ ಕೈಯಿಟ್ಟು ಹೇಳಿದರು.

"ಯು ಆರ್ ಅರೆಸ್ಟೆಡ್ !"

"ಆಲ್ ರೈಟ್" ನಗುನಗುತ್ತಲೇ ಗೋಗಟೆ ಕೋಳಗಳಿಗೆ ಕೈ ನೀಡಿದರು. ಗ್ರಂಥಾಲಯದಿಂದ ಬೇಗನೆ ಅವರನ್ನು ಹೊರ ತರಲಾಯಿತು. ಒಳನಡೆದ ಘಟನೆ ಹೊರಗೆ ನಿಂತಿದ್ದ ವಿದ್ಯಾರ್ಥಿ

ಗಳಿಗೆ ತಿಳಿದು ಎಲ್ಲ ವಿದ್ಯಾರ್ಥಿಗಳು ಗ್ರಂಥಾಲಯದ ಮುಂದೆ ನೆರೆದಿದ್ದರು. ಗೋಗಟೆ ಹೊರಬರುವವನ್ನೇ ಕಾಯುತ್ತಿದ್ದರು.

ಗೋಗಟೆಯವರನ್ನು ಹೊರತರುತ್ತಲೇ ಎರಡೂವರೆ ಸಾವಿರ ತರುಣ ವಿದ್ಯಾರ್ಥಿಗಳು ಸಿಂಹ ಗರ್ಜನೆ ಹೊರಡಿಸಿದರು.

"ವಾಸುದೇವ ಗೋಗಟೆ ಜಿಂದಾಬಾದ, ಇಂಕಿಲಾಬ ಜಿಂದಾಬಾದ, ವಂದೇ ಮಾತರಂ, ಮಹಾತ್ಮಾ ಗಾಂಧೀಜೀಕಿ ಜೈ"

ಈ ಜಯಘೋಷ ಗೋಗಟೆಯ ಕಿವಿಗಳಿಗೆ ಅಮೃತ ಎರೆಯಿತು. ತನ್ನ ಕೃತ್ಯ ತರುಣರನ್ನು ಮೆಚ್ಚಿಸಿದೆ ಎಂಬ ಅನಿಸಿಕೆಯಿಂದ ಅವನು ಸಮಾಧಾನ ಹೊಂದಿದ. ಸಹವಿದ್ಯಾರ್ಥಿಗಳ ಪ್ರೀತಿ, ಆದರಗಳಿಗೆ ಪ್ರತ್ಯುತ್ತರವಾಗಿ ಗೋಗಟೆಯೂ ಜಯ ಧ್ವನಿ ಹೊರಡಿಸಿದ.

"ವಂದೇ ಮಾತರಂ, ಇಂಕಿಲಾಬ ಜಿಂದಾಬಾದ"

ವಿದ್ಯಾರ್ಥಿಗಳೆಲ್ಲ ಗೋಗಟೆಯವರಿಗೆ ಮುತ್ತಿಗೆ ಹಾಕಿದರು. ಎಲ್ಲರಿಗೂ ಕೈ ಜೋಡಿಸಿ ನಮಸ್ಕರಿಸುತ್ತ ಗೋಗಟೆ ನುಡಿದ.

"ದುರ್ದೈವದಿಂದ ನನ್ನ ಕೆಲಸ ಯಶಸ್ವಿಯಾಗಲಿಲ್ಲ. ಸ್ನೇಹಿತರೇ, ಅದನ್ನೀಗ ಪೂರ್ಣಗೊಳಿಸುವ ಹೊಣೆ ನಿಮ್ಮೆಲ್ಲರ ಮೇಲಿದೆ. ಸೊಲ್ಲಾಪುರದಲ್ಲಿ ನಡೆದ, ನಡೆಯುತ್ತಿರುವ ಅತ್ಯಾಚಾರದ ಮತ್ತು ನಿರಪರಾಧಿಗಳಾದ ಆ ನಾಲ್ಕು ಜನ ದೇಶಭಕ್ತರನ್ನು ಗಲ್ಲಿಗೇರಿಸಿದ ಈ ನೀಚ ಬ್ರಿಟಿಷ ಸರ್ಕಾರದ ಮೇಲೆ ಸೇಡು ತೀರಿಸಿಕೊಳ್ಳಿರಿ! ನನ್ನ ನೆಚ್ಚಿನ ತರುಣ ಗೆಳೆಯರೆ, ಸೇಡು ತೀರಿಸಿಕೊಳ್ಳಲು ಸಿದ್ಧರಾಗಿರಿ."



ಒಬ್ಬ ವಿದ್ಯಾರ್ಥಿ ಅವಸರದಿಂದ ಗೋಗಟೆಯ ಫೋಟೋ ತೆಗೆದುಕೊಂಡ. ಡಿ. ವಾಯ್. ಎಸ್. ಪಿ. ಮಿಸ್ಟರ್ ಮಿಲ್ಸ್ ಅವರು ಅವಸರಿಸಿದರು. ಗೋಗಟೆಯನ್ನು ಬಹಳ ಹೊತ್ತು ಇಲ್ಲಿ ನಿಲ್ಲಿಸುವುದು ಅಪಾಯಕಾರಿ ಎಂದರಿತು ಅವನನ್ನು ತಮ್ಮ ಮೋಟಾರಿನಲ್ಲಿ ಕುಳ್ಳಿರಿಸಿದರು. ಮೋಟಾರು ತೀಕ್ಷ್ಣ ವೇಗ ಪಡೆಯಿತು.

ವಿದ್ಯಾರ್ಥಿಗಳ ಸ್ವರಗಳು ಆಗಸಕ್ಕೇರಿದುವು. ಎಲ್ಲರೂ ಜಯಘೋಷ ಹೊರಡಿಸಿದರು.

"ವಾಸುದೇವ ಗೋಗಟೆ ಜಿಂದಾಬಾದ, ಹಾಟ್‌ಸನ್ ಮುರ್ದಾಬಾದ್, ವಂದೇ ಮಾತರಂ."

ಕಾಲೇಜಿನ ಪ್ರಿನ್ಸಿಪಾಲರು ಹಾಟ್‌ಸನ್‌ರಿಗೆ ಪುಷ್ಪಮಾಲೆ ಹಾಕಿದರು. ವಿದ್ಯಾರ್ಥಿಗಳು ಚಪ್ಪಾಳೆ ತಟ್ಟಲಿಲ್ಲ. ಇನ್ನೂ ಜೋರಾಗಿ ಕಿರುಚಿದರು.

"ಗೋ ಬ್ಯಾಕ್ ಹಾಟ್‌ಸನ್, ಗೋ ಬ್ಯಾಕ್ ಹಾಟ್‌ಸನ್"

"ಹಾಟ್‌ಸನ್‌ನಿಗೆ ಧಿಕ್ಕಾರ! ಹಾಟ್‌ಸನ್‌ನಿಗೆ ಧಿಕ್ಕಾರ!"

ಕಾಲೇಜಿನಿಂದ ಹೊರಬರಲು ಸರ್ ಹಾಟ್‌ಸನ್‌ನಿಗೆ ಬಹಳ ತೊಂದರೆಯಾಯಿತು. ವಿದ್ಯಾರ್ಥಿಗಳು ದಾರಿ ಬಿಡದೆ ಅಡ್ಡಗಟ್ಟುತ್ತ ಧಿಕ್ಕಾರದ ಧ್ವನಿ ಹೊರಡಿಸಿದರು. ಪೋಲೀಸರು

ಅತ್ಯಂತ ಪ್ರಯಾಸಪಟ್ಟು ಹಾಟ್‌ಸನ್‌ರನ್ನು ಅವರ ಕಾರಿನವರೆಗೆ ಕರೆತರಬೇಕಾಯಿತು.

ಉದ್ರಿಕ್ತ ವಿದ್ಯಾರ್ಥಿಗಳು ಕಲ್ಲು ತೂರಿದರು. ಕೆಲವು ಹಾಟ್‌ಸನ್‌ನಿಗೆ ತಾಗಿದರೆ ಉಳಿದವು ಅವರ ಗಾಡಿಯ ಗ್ಲಾಸಿ ಗಪ್ಪಳಿಸಿ ಚೂರು ಚೂರು ಮಾಡಿದುವು. ಮಡ್‌ಗಾರ್ಡ ಜಜ್ಜಿ ಹೋಯಿತು.

ಮಲ್ಲಪ್ಪ ಧನಶೆಟ್ಟಿಯವರು ಹೊತ್ತಿಸಿದ್ದ ಕ್ರಾಂತಿಯ ಕಿಡಿ ಬೆಂಕಿಯಾಗಿ ಪ್ರಜ್ವಲಿಸಿ ಎಲ್ಲೆಡೆಗೂ ಜ್ವಾಲೆ ಚಾಚಿತು. ಮುಂದಿನ ತರುಣಪೀಳಿಗೆಯ ಎದೆಗಳಲ್ಲಿಯ ರಕ್ತ ಕುದಿಸಿತು. ಅವರ ನರನಾಡಿಗಳಲ್ಲೆಲ್ಲ ಹರಿದು ದೇಶಾಭಿಮಾನದ, ರಾಷ್ಟ್ರ ಸ್ವಾತಂತ್ರ್ಯದ ಕ್ರಾಂತಿ ಪುಟಿಸಿತು. ಗೋಗಟೆಯಂಥ ತರುಣ ಪೀಳಿಗೆಗೆ ದಾರಿ ಮಾಡಿಕೊಟ್ಟು, ಜಾಗೃತಿ ಮೂಡಿಸಿತು. ಕ್ರಾಂತಿಯನ್ನು ಚಿರಾಯುವಾಗಿಸಿತು.

●

ಆಧಾರ ಗ್ರಂಥಗಳು:

೧. ಸೋಲಾಪೂರ ಮಾರ್ಶಲ್ ಲಾ ಆಣಿ ಚಾರ ಹುತಾತ್ಮೆ.
ಲೇಖಕ: ವೆಂಕಟೇಶ ಗೋಪಾಲ ಅರಿಮುರಕರ.

೨. ಹುತಾತ್ಮ ಮಲ್ಲಪ್ಪ ಧನಶೆಟ್ಟಿ.
ಲೇಖಕಿ: ಲಲ್ಲೇಶ್ವರಿ ಮೊಗಿ.

→

೨೯ ಚಿಕ್ಕೋಡಿ ಪಂಡಿತಪ್ಪನವರು – ದು. ನಿಂ ಬೆಳಗಲಿ
೩೦ ಪಾವಟೆ ಸಿದ್ರಾಮಪ್ಪನವರು – ಬಿ. ಸಿ. ಜವಳಿ
೩೧ ಹಾನಗಲ್ಲ ಕುಮಾರಶಿವಯೋಗಿಗಳು – ಜ. ಚ. ನಿ.
೩೨ ರಾಂಪುರೆ ಮಹಾದೇವಪ್ಪ ನವರು – ಮ. ಗು. ಬಿರಾದಾರ
೩೩ ಬಂಥನಾಳ ಶಿವಯೋಗಿಗಳು – ಈಶ್ವರಚಂದ್ರ ಚಿಂತಾಮಣಿ
೩೪ ಆರ್. ಎಸ್ ಪಾಟೀಲರು – ವೀ. ಚ. ಹಿತ್ತಲಮನಿ
೩೫ ವ್ಯಾಕರಣದ ಮಲ್ಲಪ್ಪನವರು – ದೇ. ಜವರೇಗೌಡ
೩೬ ಬ್ಯಾ. ಎಂ. ಎಸ್. ಸರದಾರರು – ಚಂದ್ರಶೇಖರ ವಸ್ತ್ರದ
೩೭ 'ಪಂಚಾಕ್ಷರಿ ಗವಾಯಿಗಳು – ಸದಾನಂದ ಕನವಳ್ಳಿ
೩೮ ಮಹಾಂತ ಶಿವಯೋಗಿಗಳು – ಸಂಗಮೇಶ ಸವದತ್ತಿಮಠ
೩೯ ಬಬಲೇಶ್ವರ ಶಾಂತವೀರ ಪಟ್ಟಾಧ್ಯಕ್ಷರು – ಸಿಂಪಿ ಲಿಂಗಣ್ಣ
೪೦ ಅರಟಾಳ ರುದ್ರಗೌಡರು – ಎಸ್. ಎಂ. ಅಂಗಡಿ
೪೧ ಎಂ. ಪಿ. ಪಾಟೀಲರು – ಪಾಟೀಲ, ಹುಕ್ಕೇರಿ
೪೨ ವೈ. ಮಹಾಬಲೇಶ್ವರಪ್ಪನವರು – ಸಿ. ವ. ಚೆನ್ನಬಸವೇಶ್ವರರು
೪೩ ಯಜಮಾನ ವೀರಸಂಗಪ್ಪನವರು – ಬಿ. ನಂ. ಚಂದ್ರಯ್ಯ
೪೪ ನಲವಡಿ ಶ್ರೀಕಂಠಶಾಸ್ತ್ರಿಗಳು – ಮೃತ್ಯುಂಜಯ ಹೊರಕೇರಿ
೪೫ ದೇಶಮುದ್ರೆ ಮಲ್ಲಪ್ಪನವರು – ಹೀ. ಚೀ. ಶಾಂತವೀರಯ್ಯ
೪೬ ಮೆಣಸಿನಕಾಯಿ ಶಾಂತವೀರಪ್ಪನವರು – ಚೆನ್ನಕ್ಕ ಎಲಿಗಾರ
೪೭ ಜಂಗಿನ ಮುರಗಯ್ಯನವರು – ಸುಲೋಚನಾದೇವಿ ಆರಾಧ್ಯ
೪೮ ಹೊನ್ನಾಪುರಮಠ ಗದಿಗೆಯ್ಯನವರು – ಬಿ. ಕೆ. ಹೊಸಮಠ
೪೯ ಹಳ್ಳಿಕೇರಿ ಗುದ್ಲೆಪ್ಪನವರು – ಸಿದ್ದಲಿಂಗ ಪಟ್ಟಣಶೆಟ್ಟಿ
೫೦ ಸರ್ ಕಂಬಳಿ ಸಿದ್ದಪ್ಪನವರು – ಪಾಟೀಲ ಪುಟ್ಟಪ್ಪ
೫೧ ಶ್ರೇಷ್ಠಿ ವೀರಬಸವಪ್ಪನವರು – ಮ. ಗು. ಘಿವಾರಿ
೫೨ ನಾಗರಾಳ ದೊಡ್ಡಪ್ಪನವರು – ಬಿ. ಎಂ. ವಾಗಿ
೫೩ ಸಜ್ಜಲಗುಡ್ಡ ಶರಣಮ್ಮನವರು – ಗಿರಿರಾಜ ಹೊಸಮನಿ
೫೪ ಜಿ. ಎಸ್. ದಂಡಾವತಿಮಠ – ವ್ಹಿ. ಸಿ. ಮಾಲಗತ್ತಿ
೫೫ ವೈರಾಗ್ಯದ ಮಲ್ಲಣಾರ್ಯರು – ಬಿ. ಕೆ ಹಿರೇಮಠ
೫೬ ಎಸ್. ಎಸ್. ಬಸವನಾಳರು – ಬಿ. ವಿ. ಗುಂಜೆಟ್ಟಿ
೫೭ ಹಾಲಭಾವಿ ವೀರಭದ್ರಪ್ಪನವರು – ವೀರಣ್ಣ ರಾಜೂರ

# ವೀರಶೈವ ಪುಣ್ಯಪುರುಷ ಸಾಹಿತ್ಯರತ್ನಮಾಲೆ
## ಬರಲಿರುವ ಕೃತಿಗಳು

| | | | |
|---|---|---|---|
| ೧ | ಮೃತ್ಯುಂಜಯಪ್ಪಗಳು | – | ಆರ್. ಸಿ. ಹಿರೇಮಠ |
| ೨ | ಶಾಂತವೀರ ರಾಚದೇವ ಕಿತ್ತೂರ | – | ರಾ. ಯ. ಧಾರವಾಡಕರ |
| ೩ | ಡಿ. ಎಚ್. ಚಂದ್ರಶೇಖರಯ್ಯನವರು | – | ಎಂ. ಚಿದಾನಂದಮೂರ್ತಿ |
| ೪ | ಶಿ. ಜೆ. ನಂದೀಮಠರು | – | ಜಿ. ಎಂ. ಉಮಾಪತಿಶಾಸ್ತ್ರಿ |
| ೫ | ಗಿಲಗಂಚಿ ಗುರುಸಿದ್ಧಪ್ಪನವರು | – | ಮಹಾಂತೇಶ ಕಣಗಲಿ |
| ೬ | ನವಿಲಗುಂದ ಗವಿಮಠದ ಶ್ರೀಗಳು | – | ಸ. ಸ. ಮಾಳವಾಡ |
| ೭ | ಎಲೇರಿ ಅನ್ನಪೂರ್ಣಯ್ಯನವರು | – | ಬಿ. ಮಹಾದೇವಪ್ಪ |
| ೮ | ಪುರಾಣಿಕ ಬುದ್ಧಯ್ಯನವರು | – | ಬಿ. ವ್ಹಿ. ಮಲ್ಲಾಪೂರ |
| ೯ | ಗವಿಮಠದ ಗೌರೀಶಂಕರ ಸ್ವಾಮಿಗಳು | – | ಎಚ್. ಗಂಗಾಧರನ್ |
| ೧೦ | ಹೊಸಮನಿ ಸಿದ್ಧಪ್ಪನವರು | – | ಮಹದೇವ ಬಣಕಾರ |
| ೧೧ | ಅಂಬಲಿ ಚೆನ್ನಬಸವಪ್ಪನವರು | – | ಚ. ವಿ. ಮುಳಗುಂದ |
| ೧೨ | ಉದಗೀರ ಸಂಗ್ರಾಮಪ್ಪನವರು | – | ಆರ್. ಎಲ್. ಬಡಿಗೇರ |
| ೧೩ | ಟಿ. ಎಚ್. ಎಂ. ಸದಾಶಿವಯ್ಯನವರು | – | ಬಸವರಾಜ ಮಲಶೆಟ್ಟಿ |
| ೧೪ | ವೀರೇಶ ಶರಣರು | – | ಬ. ವೀ. ಹಂಪನಗೌಡ್ರು |
| ೧೫ | ಪಂಡಿತ ಸೂಗುವೀರ ಶರ್ಮಾ | – | ಲಿಂಗಣ್ಣ ಸತ್ಯಂಪೇಟೆ |

---

ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ